CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ


ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮಾರ್ಚ್ ೧೭, ೨೦೦೫ (ಫಾಲ್ಗುಣ ೨೬, ಶಕ ವರ್ಷ ೧೯೨೬) | ಸಂಚಿಕೆ ೧೧ |
|---|---|---|


## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ

**ಅಧಿಸೂಚನೆ ಕ್ರಮ ಸಂಖ್ಯೆ: ಎಲ್.ಆರ್.ಎಫ್./ಸಿಆರ್:99/2004-05, ದಿನಾಂಕ: 11ನೇ ಫೆಬ್ರವರಿ 2005**

**ವಿಷಯ:** ಯಾದಾಳು ಟ್ರಸ್ಟ್ ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಜಾಲ ಹೋಬಳಿ, ಬೆಟ್ಟಹಲಸೂರು ಗ್ರಾಮದ ಸ.ನಂ.234 ಮತ್ತು 237 ರಲ್ಲಿ 2.37 ಎಕರೆ/ಗುಂಟೆ ಜಮೀನನ್ನು ಕನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಯಾದಾಳು ಟ್ರಸ್ಟ್ ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಜಾಲ ಹೋಬಳಿ, ಬೆಟ್ಟಹಲಸೂರು ಗ್ರಾಮದ ಸ.ನಂ.234 ಮತ್ತು 237 ರಲ್ಲಿ 2.37 ಎಕರೆ/ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್ಆರ್ಎಫ್ (ಬಿಎನ್ಎ) ಸಿಆರ್: 125/04-05 ದಿನಾಂಕ: 29.01.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 234 ಮತ್ತು 237 ರಲ್ಲಿ 2-37 ಎಕರೆ/ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) (11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ ಶಿವಾಜಿನಗರ ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 28.09.2001 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1) (11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಬೆಟ್ಟಹಲಸೂರು ಗ್ರಾಮದ ಸರ್ವೆ ನಂ.234 ರಲ್ಲಿ 2-00 ಎಕರೆ, 237 ರಲ್ಲಿ 0-37 ಗುಂಟೆ ಒಟ್ಟು 2-37 ಎಕರೆ ಜಮೀನನ್ನು ಯಾದಾಳು ಟ್ರಸ್ಟ್, ನಂ.28/1, 1ನೇ ಅಂತಸ್ತು, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು-52 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇ.55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ

ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.

3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ವಿದ್ಯಾ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 397 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ**

**ಅಧಿಸೂಚನೆ ಕ್ರಮ ಸಂಖ್ಯೆ: ಎಲ್.ಆರ್.ಎಫ್./ಸಿಆರ್:93/2003-04, ದಿನಾಂಕ: 11ನೇ ಫೆಬ್ರವರಿ 2005**

**ವಿಷಯ:** ಬೆಂಗಳೂರು ಕಾರ್ಮೆಲ್ ಸೊಸೈಟಿ, ನಂ.307, 3ನೇ ಮುಖ್ಯರಸ್ತೆ, 3ನೇ ಹಂತ, ಜೆ.ಪಿ.ನಗರ, ಬೆಂಗಳೂರು-78 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಕೊಡತಿ ಗ್ರಾಮದ ಸ.ನಂ.28/4 ರಲ್ಲಿ 1-00.08 ಎಕರೆ (ಒಂದು ಎಕರೆ ಸೊನ್ನೆ ಪಾಯಿಂಟ್ ಸೊನ್ನೆ ಎಂಟು ಗುಂಟೆ) ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಬೆಂಗಳೂರು ಕಾರ್ಮೆಲ್ ಸೊಸೈಟಿ, ನಂ.307, 3ನೇ ಮುಖ್ಯರಸ್ತೆ, 3ನೇ ಹಂತ, ಜೆ.ಪಿ.ನಗರ, ಬೆಂಗಳೂರು-78 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಕೊಡತಿ ಗ್ರಾಮದ ಸ.ನಂ.28/4 ರಲ್ಲಿ 1-00.08 ಎಕರೆ (ಒಂದು ಎಕರೆ ಸೊನ್ನೆ ಪಾಯಿಂಟ್ ಸೊನ್ನೆ ಎಂಟು ಗುಂಟೆ) ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್ಆರ್ಎಫ್ ಸಿಆರ್:93/04-05 ದಿನಾಂಕ: 11.01.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 28/4 ರಲ್ಲಿ 1-00.08 ಎಕರೆ (ಒಂದು ಎಕರೆ ಸೊನ್ನೆ ಪಾಯಿಂಟ್ ಸೊನ್ನೆ ಎಂಟು ಗುಂಟೆ) ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) (11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಂಘ ಸಂಸ್ಥೆಗಳ ನೋಂದಣಾಧಿಕಾರಿಗಳ ಕಛೇರಿ, ಬೆಂಗಳೂರು ರಲ್ಲಿ ದಿನಾಂಕ: 28.05.1987 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಒಪ್ಪಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1) (11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಕೊಡತಿ ಗ್ರಾಮದ ಸ.ನಂ.28/4 ರಲ್ಲಿ 1-00.08 ಎಕರೆ (ಒಂದು ಎಕರೆ ಸೊನ್ನೆ ಪಾಯಿಂಟ್ ಸೊನ್ನೆ ಎಂಟು ಗುಂಟೆ) ಜಮೀನನ್ನು ಬೆಂಗಳೂರು ಕಾರ್ಮೆಲ್ ಸೊಸೈಟಿ, ನಂ.307, 3ನೇ ಮುಖ್ಯರಸ್ತೆ, 3ನೇ ಹಂತ, ಜೆ.ಪಿ.ನಗರ, ಬೆಂಗಳೂರು-78 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಮತ್ತು ಚಾರಿಟಬಲ್ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇ.55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ವಿದ್ಯಾ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.

5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 398 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ

### ಅಧಿಸೂಚನೆ ಕ್ರಮ ಸಂಖ್ಯೆ: ಎಲ್.ಆರ್.ಎಫ್./ಸಿಆರ್:98/2004-05, ದಿನಾಂಕ: 11ನೇ ಫೆಬ್ರವರಿ 2005

**ವಿಷಯ:** ಟಿ.ಕೆ. ನಾರಾಯಣಪ್ಪ ಫೌಂಡೇಷನ್ ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಜಾಲ ಹೋಬಳಿ, ಬೆಟ್ಟಹಲಸೂರು ಗ್ರಾಮದ ಸ.ನಂ.237/3 ರಲ್ಲಿ 1.00 ಎಕರೆ/ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಟಿ.ಕೆ. ನಾರಾಯಣಪ್ಪ ಫೌಂಡೇಷನ್ ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಜಾಲ ಹೋಬಳಿ, ಬೆಟ್ಟಹಲಸೂರು ಗ್ರಾಮದ ಸ.ನಂ.237/3 ರಲ್ಲಿ 1.00 ಎಕರೆ/ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್ಆರ್ಎಫ್ (ಬಿಎನ್ಎ) ಸಿಆರ್:124/04-05 ದಿನಾಂಕ: 29.01.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 237/3 ರಲ್ಲಿ 1-00 ಎಕರೆ/ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) (11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.-

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ ಶ್ರೀರಾಂಪುರ ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 10.06.2004 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1) (11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಬೆಟ್ಟಹಲಸೂರು ಗ್ರಾಮದ ಸರ್ವೆ ನಂ.237/3 ರಲ್ಲಿ 1-00 ಗುಂಟೆ/ಎಕರೆ ಜಮೀನನ್ನು ಟಿ.ಕೆ. ನಾರಾಯಣಪ್ಪ ಫೌಂಡೇಷನ್, ನಂ.1312, 2ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು-52 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇ.55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ವಿದ್ಯಾ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 399 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ**

**ಅಧಿಸೂಚನೆ ಕ್ರಮ ಸಂಖ್ಯೆ: ಎಲ್.ಆರ್.ಎಫ್./ಸಿಆರ್:115/2004-05, ದಿನಾಂಕ: 11ನೇ ಫೆಬ್ರವರಿ 2005**

**ವಿಷಯ:** ಪದ್ಮಶ್ರೀ ಚಾರಿಟಬಲ್ ಟ್ರಸ್ಟ್ ನಂ.23, ಗುರುಕೃಪಾ ಲೇಔಟ್, 80 ಅಡಿ ರಸ್ತೆ, ನಾಗರಭಾವಿ, ಬೆಂಗಳೂರು, ರವರು ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಕೊಮ್ಮಘಟ್ಟ ಗ್ರಾಮದ ಸ.ನಂ.64 ರಲ್ಲಿ 1-00 ಎಕರೆ, 144 ರಲ್ಲಿ 4-00 ಎಕರೆ 145 ರಲ್ಲಿ 4-00 ಎಕರೆ, 149 ರಲ್ಲಿ 1.20 ಎಕರೆ ಒಟ್ಟು 10-20 ಎಕರೆ (ಹತ್ತು ಎಕರೆ ಇಪ್ಪತ್ತು ಗುಂಟೆ) ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಪದ್ಮಶ್ರೀ ಚಾರಿಟಬಲ್ ಟ್ರಸ್ಟ್ ನಂ.23, ಗುರುಕೃಪಾ ಲೇಔಟ್, 80 ಅಡಿ ರಸ್ತೆ, ನಾಗರಭಾವಿ, ಬೆಂಗಳೂರು, ರವರು ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಕೊಮ್ಮಘಟ್ಟ ಗ್ರಾಮದ ಸ.ನಂ.64 ರಲ್ಲಿ 1-00 ಎಕರೆ, 144 ರಲ್ಲಿ 4-00 ಎಕರೆ, 145 ರಲ್ಲಿ 4-00 ಎಕರೆ, 149 ರಲ್ಲಿ 1.20 ಎಕರೆ ಒಟ್ಟು 10-20 ಎಕರೆ (ಹತ್ತು ಎಕರೆ ಇಪ್ಪತ್ತು ಗುಂಟೆ) ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್ಆರ್ಎಫ್ (109) ಸಿಆರ್:50/04-05 ದಿನಾಂಕ: 02.02.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 64 ರಲ್ಲಿ 1-00 ಎಕರೆ 144 ರಲ್ಲಿ 4-00 ಎಕರೆ, 145 ರಲ್ಲಿ 4-00 ಎಕರೆ 149 ರಲ್ಲಿ 1-20 ಎಕರೆ ಒಟ್ಟು 10-20 ಎಕರೆ (ಹತ್ತು ಎಕರೆ ಇಪ್ಪತ್ತು ಗುಂಟೆ) ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) (11) ರಲ್ಲಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ ರಾಜಾಜಿನಗರ ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 01.06.1994 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಒಪ್ಪಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1) (11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೊಮ್ಮಘಟ್ಟ ಗ್ರಾಮದ ಸ.ನಂ.64 ರಲ್ಲಿ 1-00 ಎಕರೆ, 144 ರಲ್ಲಿ 4-00 ಎಕರೆ, 145 ರಲ್ಲಿ 4-00 ಎಕರೆ, 149 ರಲ್ಲಿ 1.20 ಎಕರೆ ಒಟ್ಟು 10-20 ಎಕರೆ (ಹತ್ತು ಎಕರೆ ಇಪ್ಪತ್ತು ಗುಂಟೆ) ಜಮೀನನ್ನು ಪದ್ಮಶ್ರೀ ಚಾರಿಟಬಲ್ ಟ್ರಸ್ಟ್ ನಂ.23, ಗುರುಕೃಪಾ ಲೇಔಟ್, 80 ಅಡಿ ರಸ್ತೆ, ನಾಗರಭಾವಿ, ಬೆಂಗಳೂರು ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವೃಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಮತ್ತು ಚಾರಿಟಬಲ್ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇ.55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ವಿದ್ಯಾ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 400 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ**

**ಅಧಿಕೃತ ಜ್ಞಾಪನ ಪತ್ರ ಕ್ರಮ ಸಂಖ್ಯೆ: ಎಲ್.ಆರ್.ಎಫ್./ಸಿಆರ್:114/2004-05, ದಿನಾಂಕ: 11ನೇ ಫೆಬ್ರವರಿ 2005**

**ವಿಷಯ:** ಟಿ.ಕೆ. ನಾರಾಯಣಪ್ಪ ಫೌಂಡೇಷನ್, ನಂ.1312, 2ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-50 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೊಮ್ಮಘಟ್ಟ ಗ್ರಾಮದ ಸ.ನಂ.69/1 ರಲ್ಲಿ 4-02 ಎಕರೆ/ಗುಂಟೆ ಸ.ನಂ.70/1 ರಲ್ಲಿ 0-06 ಗುಂಟೆ, ಸ.ನಂ.146 ರಲ್ಲಿ 3-35 ಎಕರೆ/ಗುಂಟೆ ಒಟ್ಟು 8-03 ಎಕರೆ ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಟಿ.ಕೆ. ನಾರಾಯಣಪ್ಪ ಫೌಂಡೇಷನ್, ನಂ.1312, 2ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-50 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೊಮ್ಮಘಟ್ಟ ಗ್ರಾಮದ ಸ.ನಂ.69/1 ರಲ್ಲಿ 4-02 ಎಕರೆ/ಗುಂಟೆ ಸ.ನಂ.70/1 ರಲ್ಲಿ 0-06 ಗುಂಟೆ, ಸ.ನಂ.146 ರಲ್ಲಿ 3-35 ಎಕರೆ/ಗುಂಟೆ ಒಟ್ಟು 8-03 ಎಕರೆ ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ ರವರ ಪತ್ರ ಸಂಖ್ಯೆ: ಎಲ್‌ಆರ್‌ಎಫ್ (109) ಸಿಆರ್:58/04-05 ದಿನಾಂಕ: 2.2.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 69/1 ರಲ್ಲಿ 4-00 ಎಕರೆ/ಗುಂಟೆ, ಸ.ನಂ.70/1 ರಲ್ಲಿ 0-06 ಗುಂಟೆ, ಸ.ನಂ.146 ರಲ್ಲಿ 3-35 ಎಕರೆ/ಗುಂಟೆ ಒಟ್ಟು 8-03 ಎಕರೆ/ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) (11) ರಲ್ಲಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.-

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ ಶ್ರೀರಾಂಪುರ ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 10.06.2004 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1) (11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೊಮ್ಮಘಟ್ಟ ಗ್ರಾಮದ ಸ.ನಂ.69/1 ರಲ್ಲಿ 4-02 ಎಕರೆ/ಗುಂಟೆ ಸ.ನಂ.70/1 ರಲ್ಲಿ 0-06 ಗುಂಟೆ, ಸ.ನಂ.146 ರಲ್ಲಿ 3-35 ಎಕರೆ/ಗುಂಟೆ ಒಟ್ಟು 8-03 ಎಕರೆ ಗುಂಟೆ ಜಮೀನನ್ನು ಟಿ.ಕೆ. ನಾರಾಯಣಪ್ಪ ಫೌಂಡೇಷನ್, ನಂ.1312, 2ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-50 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇ.55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ವಿದ್ಯಾ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 401 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

**ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಕಛೇರಿ, ಜಿಲ್ಲಾ ಪಂಚಾಯತ್, ಗದಗ್ ಇವರ ನಡವಳಿಗಳು**

**ವಿಷಯ:** ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು, ಬೆಳ್ಳಟ್ಟಿ ಗ್ರಾಮ ಪಂಚಾಯತನ್ನು ವಿಸರ್ಜಿಸುವ ಕುರಿತು.

**ಉಲ್ಲೇಖ:** 1) ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ, ಶಿರಹಟ್ಟಿ ಇವರ ಪ್ರಸ್ತಾವನೆ ಸಂಖ್ಯೆ: ತಾಪಂಶಿ:ಗ್ರಾಪಂ: ವಹಿ: 2004-05/613 ದಿನಾಂಕ: 18.12.2004.

2) ತಾಲ್ಲೂಕು ಪಂಚಾಯತ ಶಿರಹಟ್ಟಿಯ ದಿನಾಂಕ: 04.01.2005 ಸಾಮಾನ್ಯ ಸಭೆಯ ನಡುವಳಿಗಳು.

3) ಈ ಕಾರ್ಯಾಲಯದ ತಿಳುವಳಿಕೆ ಪತ್ರ ಸಂಖ್ಯೆ: ಜಿಪಂಗ:ಪವಿ:ಬೆಗ್ರಾಪಂ:04-05, ದಿನಾಂಕ: 13.01.2005.

4) ಗದಗ್ ಜಿಲ್ಲಾ ಪಂಚಾಯತ್‌ನ ದಿನಾಂಕ: 22.01.2005 ರಂದು ಜರುಗಿದ ಸಾಮಾನ್ಯ ಸಭೆಯ ನಡುವಳಿಗಳು.

**ಪೀಠಿಕೆ:**

ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು, ಬೆಳ್ಳಟ್ಟಿ ಗ್ರಾಮ ಪಂಚಾಯತ್‌ನ ಒಟ್ಟು 17 ಸದಸ್ಯರಲ್ಲಿ ಒಬ್ಬರು ಮೃತರಾಗಿದ್ದು, ಹಾಗೂ ಒಂಭತ್ತು ಸದಸ್ಯರು ರಾಜೀನಾಮೆ ನೀಡಿದ್ದು, ಈಗ ಕೇವಲ ಏಳು ಸದಸ್ಯರು ಮಾತ್ರ ಉಳಿದಿರುವುದರಿಂದ ಕಾನೂನಿನ ಅಡಿಯಲ್ಲಿ ಕಾರ್ಯನಿರ್ವಹಿಸಲು, ಕನಿಷ್ಠ

"ಅರ್ಧದಷ್ಟು" ಸದಸ್ಯರು, ಅಂದರೆ ಕನಿಷ್ಠ ಒಂಭತ್ತು ಜನ ಸದಸ್ಯರು ಇರುವುದು ಅವಶ್ಯಕವಾಗಿರುವುದರಿಂದ ಆದರೆ ಪ್ರಸ್ತುತದಲ್ಲಿ ಕೇವಲ ಏಳು ಸದಸ್ಯರನ್ನು ಹೊಂದಿದ ಗ್ರಾಮ ಪಂಚಾಯತ, ಬೆಳ್ಳಟ್ಟಿಯು, ದೈನಂದಿನ ಕಾರ್ಯನಿರ್ವಹಣೆ ಸಾಧ್ಯವಿಲ್ಲವೆಂದು ವರದಿ ಸಲ್ಲಿಸುತ್ತ, ಪಂಚಾಯತ್ ರಾಜ್ ಅಧಿನಿಯಮ 1993 ಪ್ರಕರಣ 268 ರಂತೆ ಬೆಳ್ಳಟ್ಟಿ ಗ್ರಾಮ ಪಂಚಾಯತನ್ನು ವಿಸರ್ಜಿಸಲು, ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್, ಶಿರಹಟ್ಟಿ ಇವರು ವರದಿ ಸಲ್ಲಿಸಿದ್ದಾರೆ.

ತಾಲ್ಲೂಕು ಪಂಚಾಯತ್, ಶಿರಹಟ್ಟಿಯ ದಿನಾಂಕ: 04.01.2005 ಸಾಮಾನ್ಯ ಸಭೆಯಲ್ಲಿ, ಬೆಳ್ಳಟ್ಟಿ ಗ್ರಾಮ ಪಂಚಾಯತನ್ನು "ಕೋರಂ" ಕೊರತೆಯ ಕಾರಣ, ವಿಸರ್ಜಿಸಬಹುದು ಎಂದು ನಿರ್ಣಯ ಕೈಕೊಳ್ಳಲಾಗಿದೆ.

ಪಂಚಾಯತ್ ರಾಜ್ ಅಧಿನಿಯಮ 1993, ಪ್ರಕರಣ 268 ರಲ್ಲಿ ಸೂಚಿಸಿದಂತೆ, ಗ್ರಾಮ ಪಂಚಾಯತಿಯು ಕರ್ತವ್ಯಗಳನ್ನು ನೆರವೇರಿಸಲು ಸಕ್ಷಮವಾಗಿಲ್ಲದಿದ್ದರೆ, ಅಂತಹ ಗ್ರಾಮ ಪಂಚಾಯತಿಯನ್ನು ವಿಸರ್ಜಿಸಲು ಜಿಲ್ಲಾ ಪಂಚಾಯತಿಗೆ ಅಧಿಕಾರ ನೀಡಲಾಗಿದೆ.

ಪಂಚಾಯತ್ ರಾಜ್ ಅಧಿನಿಯಮ 1993, ಪ್ರಕರಣ 268(3) ರಲ್ಲಿ ಸೂಚಿಸಿದಂತೆ, ವಿಸರ್ಜನೆ ಮುನ್ನ ಆಕ್ಷೇಪಣೆಗಳನ್ನು ನಿವೇದಿಸಿಕೊಳ್ಳಲು ಒಂದು ಅವಕಾಶ ನೀಡಲಾಗಿದೆ.

ಕಾರ್ಯದರ್ಶಿ ಗ್ರಾಮ ಪಂಚಾಯತ್, ಬೆಳ್ಳಟ್ಟಿ ಇವರು, ಸದರಿ ಗ್ರಾಮ ಪಂಚಾಯತ್‌ನಲ್ಲಿ ಈಗ ಕೇವಲ 7 ಸದಸ್ಯರು ಉಳಿದಿರುವುದನ್ನು ಹಾಗೂ "ಕೋರಂ" ಅಭಾವ ಇರುವುದನ್ನು ಖಚಿತಪಡಿಸಿ ವಿವರಣೆ ಸಲ್ಲಿಸಿದ್ದಾರೆ.

ಬೆಳ್ಳಟ್ಟಿ ಗ್ರಾಮ ಪಂಚಾಯತಿಯು, "ಕೋರಂ" ಅಭಾವದ ಕಾರಣ, ಕರ್ತವ್ಯಗಳನ್ನು ನೆರವೇರಿಸಲು ಸಕ್ಷಮವಾಗಿಲ್ಲದ ಕಾರಣ, ಗದಗ್ ಜಿಲ್ಲಾ ಪಂಚಾಯತಿಯು ದಿನಾಂಕ: 22.01.2005 ರಂದು ಜರುಗಿದ ಸಾಮಾನ್ಯ ಸಭೆಯಲ್ಲಿ ಈ ಗ್ರಾಮ ಪಂಚಾಯತಿಯನ್ನು ವಿಸರ್ಜಿಸಬೇಕೆಂದು ನಿರ್ಧಾರ ಕೈಕೊಳ್ಳಲಾಗಿದೆ.

ಮೇಲಿನ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಗ್ರಾಮ ಪಂಚಾಯತ್, ಬೆಳ್ಳಟ್ಟಿಯನ್ನು ವಿಸರ್ಜಿಸುವುದು ಸೂಕ್ತವೆಂದು ಖಚಿತವಾಗಿದ್ದರಿಂದ ಕೆಳಗಿನಂತೆ ಆದೇಶವನ್ನು ನೀಡಲಾಗಿದೆ.

**ಆದೇಶ ಸಂಖ್ಯೆ: ಜಿಪಂಗ:ಪವಿ:ಬೆಗ್ರಾಪಂ:2004-05, ದಿನಾಂಕ: 7ನೇ ಫೆಬ್ರವರಿ 2005**

ಮೇಲಿನ ಪೀಠಿಕೆಯಲ್ಲಿ ಪ್ರಸ್ತಾಪಿಸಲಾದ ಎಲ್ಲ ಅಂಶಗಳ ಅನ್ವಯ, ಬೆಳ್ಳಟ್ಟಿ ಗ್ರಾಮ ಪಂಚಾಯತ್‌ನಲ್ಲಿ 17 (ಹದಿನೇಳು) ಸದಸ್ಯರಲ್ಲಿ, ಪ್ರಸ್ತುತ ಕೇವಲ 7 (ಏಳು) ಸದಸ್ಯರು ಉಳಿದಿದ್ದು, ಗ್ರಾಮ ಪಂಚಾಯತಿಗೆ ವಿಧಿಸಿದ ಕರ್ತವ್ಯಗಳನ್ನು ನೆರವೇರಿಸಲು ಸಕ್ಷಮವಾಗಿಲ್ಲವೆಂಬುದು ಖಚಿತವಾದ ಕಾರಣಗಳಿಂದ, ಪಂಚಾಯತ್ ರಾಜ್ ಅಧಿನಿಯಮ 1993, ಪ್ರಕರಣ 268 (1) ರಲ್ಲಿ ನೀಡಲಾದ ಅಧಿಕಾರದ ಮೇರೆಗೆ, ಗ್ರಾಮ ಪಂಚಾಯತ್, ಬೆಳ್ಳಟ್ಟಿಯ ಚುನಾಯಿತ ಗ್ರಾಮ ಪಂಚಾಯತನ್ನು ಈ ಆದೇಶದ ಮೂಲಕ ವಿಸರ್ಜಿಸಲಾಗಿದೆ.

ಪಂಚಾಯತ್ ರಾಜ್ ಅಧಿನಿಯಮ 1993 ಪ್ರಕರಣ 268 (7,ಎ) ನಲ್ಲಿ ಸೂಚಿಸಿದಂತೆ, ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ವಿಸರ್ಜಿತ ಗ್ರಾಮ ಪಂಚಾಯಿತಿಗಳಿಗೆ ಸಾರ್ವಜನಿಕ ಹಿತದೃಷ್ಟಿಯಿಂದ ಆಡಳಿತಾಧಿಕಾರಿಗಳನ್ನು ನೇಮಕ ಮಾಡಬಹುದಾಗಿದೆ.

ಶ್ರೀ ಐ.ಬಿ. ಬೆನಕೊಪ್ಪ, ಸಮನ್ವಯ ಅಧಿಕಾರಿಗಳು, ಸರ್ವ ಶಿಕ್ಷಣ ಅಭಿಯಾನ, ಶಿಕ್ಷಣ ಇಲಾಖೆ, ಶಿರಹಟ್ಟಿ, ಇವರು ಬೆಳ್ಳಟ್ಟಿ ಗ್ರಾಮ ಪಂಚಾಯತ್‌ನ ಆಡಳಿತಾಧಿಕಾರಿಯಾಗಿ ಅಧಿಕಾರ ವಹಿಸಿಕೊಳ್ಳಲು ಮತ್ತು ಬೆಳ್ಳಟ್ಟಿ ಗ್ರಾಮ ಪಂಚಾಯತ್‌ನ ಸಕ್ಷಮ ಕರ್ತವ್ಯಗಳನ್ನು ನೆರವೇರಿಸುವಂತೆ ಆದೇಶಿಸಲಾಗಿದೆ.

ಈ ಆದೇಶವು ಆದೇಶದ ದಿನಾಂಕದಿಂದಲೇ ಜಾರಿಯಾಗಿದ್ದು, ಬೆಳ್ಳಟ್ಟಿ ಗ್ರಾಮ ಪಂಚಾಯತಿಯ ಚುನಾವಣೆ ಜರುಗುವವರೆಗೆ ಅಥವಾ ಆರು ತಿಂಗಳವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ, ಜಾರಿಯಲ್ಲಿರುತ್ತದೆ.

ಪಿ.ಆರ್. 402 ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಗದಗ್.

**ಮೆ: ದಿವಾಣಿ ನ್ಯಾಯಾಧೀಶರು (ಕಿ.ಶ್ರೇ) ವ ಜೆ ಎಮ್ ಎಫ್.ಸಿ. ಹುನಗುಂದ ಇವರ ನ್ಯಾಯಾಲಯದಲ್ಲಿ**

**ಕ್ರಿಮಿನಲ್ ಮೊಕದ್ದಮೆ ನಂ.60:05, (ಹುನಗುಂದ ಠಾಣಾ ಗುನ್ನಾ ನಂ.7:05)**

**ಸಾರ್ವಜನಿಕ ನೋಟೀಸು**

ಈ ನೋಟೀಸ್ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ನ್ಯಾಯಾಲಯದ ಮೇಲೆ ಹೇಳಿದ ಕ್ರಿಮಿನಲ್ ಮೊಕದ್ದಮೆ ನಂ.60:05ನೇದ್ದರಲ್ಲಿ ಮೃತ ಆರೋಪಿ ಮಹಾಲಿಂಗಪ್ಪ ತಂದೆ ಬಸವಣ್ಣ ವಯಸ್ಸು:54, ಸಾ: ಬಿಳಗರಹಳ್ಳಿ, ತಾ: ತಿಪಟೂರು, ಜಿ: ತುಮಕೂರು ಈತನು ನಡೆಸುತ್ತಿದ್ದ ಟಾಟಾ ನಂ.207 ಕೆಎ.44:3699 ನೇದ್ದನ್ನು ಅಪಘಾತಪಡಿಸಿ ಮರಣ ಹೊಂದಿದ್ದು ಇರುತ್ತದೆ. ಸದರಿ ವಾಹನದಲ್ಲಿ ವಾರಸುದಾರರಿಲ್ಲದ ಹಣ ರೂ.15,82,460-00 ನೇದ್ದನ್ನು ದಿನಾಂಕ: 5.1.2005 ರಂದು ಸಿಪಿಐ ಹುನಗುಂದ ರವರು ಪಿ.ಎಫ್. ನಂ.6:05 ನೇದ್ದರಲ್ಲಿ ಜಪ್ತಿ ಮಾಡಿದ್ದು ಇರುತ್ತದೆ. ಹಾಗೂ ದಿನಾಂಕ: 17.1.2005ರ ನ್ಯಾಯಾಲಯದ ಆದೇಶದ ಪ್ರಕಾರ ಸದರಿ ಹಣವನ್ನು ಎಸ್.ಬಿ.ಐ. ಹುನಗುಂದ ಇವರ ಎಸ್.ಬಿ. ಖಾತೆ ನಂ.01100050221 ರಲ್ಲಿ ಜಮಾ ಮಾಡಿದ್ದು ಇರುತ್ತದೆ. ಹಾಗಾಗಿ ಮೇಲೆ ಹೇಳಿದ ಹಣಕ್ಕೆ ಸಂಬಂಧಪಟ್ಟ ವಾರಸುದಾರರು ಯಾರಾದರೂ ಇದ್ದಲ್ಲಿ ಸದರೀ ನೋಟೀಸ್ ಪ್ರಕಟಗೊಂಡ ದಿನಾಂಕದಿಂದ 6 ತಿಂಗಳೊಳಗಾಗಿ ನ್ಯಾಯಾಲಯಕ್ಕೆ ಹಾಜರಾಗಿ ತಮ್ಮ ಹಕ್ಕೊತ್ತಾಯವನ್ನು (ಕ್ಲೇಮ್) ರುಜುವಾತುಪಡಿಸಿ ಮೇಲೆ ಹೇಳಿದ ಹಣ 15,82,460-00 ತೆಗೆದುಕೊಂಡು ಹೋಗಬಹುದು. ಇಲ್ಲವಾದಲ್ಲಿ ಮೇಲೆ ಹೇಳಿದ ಹಣವನ್ನು ಕಾನೂನು ರೀತಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ ಅಂತಾ ಈ ನೋಟೀಸ್ ಮೂಲಕ ತಿಳಿಯಪಡಿಸಲಾಗಿದೆ.

ಈ ಹೊತ್ತು ದಿನಾಂಕ: 18ನೇ ಫೆಬ್ರವರಿ 2005 ರಂದು ನಮ್ಮ ಸಹಿ ಹಾಗೂ ನ್ಯಾಯಾಲಯದ ಮೊಹರ್‌ದೊಂದಿಗೆ ಕೊಡಲ್ಪಟ್ಟಿತು.

**ಆರ್. ರವಿ**

ಪಿ.ಆರ್. 403 ದಿವಾಣಿ ನ್ಯಾಯಾಧೀಶರು (ಕಿ.ಶ್ರೇ) ವ ಜೆ ಎಮ್ ಎಫ್‌ಸಿ, ಹುನಗುಂದ.

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ಜಿಲ್ಲಾ ನೋಂದಣಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ ಇವರ ನಡವಳಿಗಳು**

**ವಿಷಯ:** ಕೋಲಾರ ಜಿಲ್ಲೆಯಲ್ಲಿನ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಗೊಂಡ ಶ್ರೀ ಕೆ.ಎನ್. ನಾರಾಯಣಸ್ವಾಮಿ ಬಿನ್ ಶ್ರೀ ನಾರೆಪ್ಪ, ಎ.ಡಿ. ಇವರ ನೇಮಕಾತಿ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿ.ಪಿ.ಎ.ಆರ್. 13 ಎಸ್.ಬಿ.ಸಿ. 2001, ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನಿಯಮಗಳು 2001.

2) ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: ಇ.ಎಸ್.ಟಿ. 1-273:2001-02, ದಿನಾಂಕ: 14.12.2004.

3) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ.55:2004-05, ದಿನಾಂಕ: 22.12.2004.

**ಪ್ರಸ್ತಾವನೆ:**

ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (2)ರ ಅವರ ಅಲಾಟ್‌ಮೆಂಟ್ ಆರ್ಡರ್‌ನಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ, ಅಲಾಟ್ ಮಾಡಿದ್ದರ ಮೇಲೆ, ಕೆಳಕಂಡ ಅಭ್ಯರ್ಥಿಯನ್ನು ಉಲ್ಲೇಖ (3)ರ ಈ ಕಛೇರಿಯ ಆದೇಶದಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಅದೇ ಆದೇಶದಲ್ಲಿ ಇವರನ್ನು ಅವರ ಹೆಸರಿನ ಮುಂದೆ ಸೂಚಿಸಿದ ಕಛೇರಿಗೆ ಸ್ಥಳ ನಿಯುಕ್ತಿ ಮಾಡಿ, ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ನೇಮಕಾತಿ ಮಾಡಿದ ಕಛೇರಿಯಲ್ಲಿ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಸದರಿ ಅಭ್ಯರ್ಥಿಗೆ ಸೂಚಿಸಿ, ಉಲ್ಲೇಖ (3)ರ ಸದರಿ ನೇಮಕಾತಿ ಆದೇಶವನ್ನು ಆರ್.ಪಿ.ಎ.ಡಿ. ಮೂಲಕ ಅಭ್ಯರ್ಥಿಗೆ ಕಳುಹಿಸಲಾಗಿತ್ತು.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಎಸ್.ಸಿ: ಎಸ್.ಟಿ. | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ನಿಯುಕ್ತಿಗೊಳಿಸಿದ ಕಛೇರಿ | ವರ್ಗೀಕರಣ |
|---|---|---|---|---|
| 1 | ಕೆ.ಎಸ್. ನಾರಾಯಣಸ್ವಾಮಿ, ಬಿನ್ ನಾರೆಪ್ಪ, ಎ.ಡಿ. ಕೆಂಬೋಡಿ ಗ್ರಾಮ, ಕೋಲಾರ ತಾಲ್ಲೂಕು ಮತ್ತು ಜಿಲ್ಲೆ. | ಎಸ್.ಸಿ. | ಉಪನೋಂದಣಿ ಕಛೇರಿ, ಚಿಂತಾಮಣಿ. | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ |

ಮೇಲ್ಕಂಡ ಅಭ್ಯರ್ಥಿಯು ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ದಿನಾಂಕ: 01.01.2005 ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಅವರನ್ನು ನೇಮಕ ಮಾಡಿದ ಕಛೇರಿಯಲ್ಲಿ ತಹಲ್‌ವರೆವಿಗೂ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಕೆಲಸಕ್ಕೆ ಹಾಜರಾಗಲು ಇವರಿಗೆ ನೀಡಿದ ಹದಿನೈದು ದಿನಗಳ ಕಾಲಾವಕಾಶವು ದಿನಾಂಕ: 15.01.2005 ರಂದು ಮುಕ್ತಾಯವಾಗಿರುತ್ತದೆ. ಉಲ್ಲೇಖ (3)ರ ಈ ಕಛೇರಿಯ ನೇಮಕಾತಿ ಆದೇಶವನ್ನು ಸ್ವೀಕರಿಸಿದ ನಂತರವೂ ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳ ಕಾಲಾವಕಾಶಕ್ಕಿಂತ ಇನ್ನೂ ಹೆಚ್ಚಿನ ಕಾಲಾವಕಾಶ ನೀಡಬೇಕೆಂದು ಈ ಅಭ್ಯರ್ಥಿಯು ಯಾವುದೇ ರೀತಿಯ ಕೋರಿಕೆಯನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯನ್ನು ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ.55:2004-05, ದಿನಾಂಕ: 19ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಅಧಿಸೂಚನೆ ಅನ್ವಯ ಹಾಗೂ 1977ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 18(3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಮೇಲ್ಕಂಡ ಅಭ್ಯರ್ಥಿಯಾದ ಶ್ರೀ ಕೆ.ಎಸ್. ನಾರಾಯಣಸ್ವಾಮಿ ಇವರನ್ನು ಈ ಇಲಾಖೆಯಲ್ಲಿನ ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿದ ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಈ ಜಿಲ್ಲೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ಪಿ.ಆರ್. 403(ಎ) ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು, ಕೋಲಾರ ಜಿಲ್ಲೆ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಆದೇಶ ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:248/2004-05, ದಿನಾಂಕ: 1ನೇ ಫೆಬ್ರವರಿ 2005**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀನಷರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು:** ಆರಕ್ಷಕ ಉಪ ನಿರೀಕ್ಷಕರು, ಮಡಿಕೇರಿ ಗ್ರಾಮಾಂತರ ಠಾಣೆ, ಮಡಿಕೇರಿ.

**ವಿರುದ್ಧ**

**ಅರ್ಜಿದಾರರು:** ಪರಮೇಶ್, ತಂದೆ ಹರದೇಗೌಡ, ಮಾರ್ಕೆಟ್ ರಸ್ತೆ, ಕುಶಾಲನಗರ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 27.6.2004ರ ಸಾಯಂಕಾಲ ಸುಮಾರು 9.40ರ ಸಮಯದಲ್ಲಿ ದೊರೆತ ಖಚಿತ ವರ್ತಮಾನದ ಪ್ರಕಾರ ವಾಹನ ಸಂಖ್ಯೆ: ಕೆಎ-06-1662 ಲಾರಿಯಲ್ಲಿ ಅಕ್ರಮ ಸ್ಪಿರಿಟ್ ಸಾಗಾಣಿಕೆ ಬಗ್ಗೆ ತಿಳಿದು ಬಂದಿದ್ದು ಆ ಸಮಯದಲ್ಲಿ ಸಾರ್ವಜನಿಕರಾದ ಅಶೋಕ್, ಅಜಯ್, ಪ್ರಶಾಂತ್, ದಾಸ್ ಅಲ್ಲದೇ ಕುಸುಮ್ ರವರನ್ನು ಕರೆದುಕೊಂಡು ಸಿದ್ದಾಪುರದ ಬಳಿ ಲಾರಿಯನ್ನು ತಡೆದಿರುತ್ತಾರೆ. ಲಾರಿಯನ್ನು ಚಾಲಕ ನಿಲ್ಲಿಸದೆ ವೇಗವಾಗಿ ಕಟ್ಟೇಮಾಡು, ಕೊಂಡಗೇರಿ ಮೂಲಕ ಮೂರ್ನಾಡುವಿನ ಐಕೊಳ ಗ್ರಾಮದಲ್ಲಿ ಲಾರಿ ಚಾಲಕನ ಆಯ ತಪ್ಪಿ ರಸ್ತೆಯ ಪಕ್ಕದ ಗುಂಡಿಗೆ ಲಾರಿಯನ್ನು ಬೀಳಿಸಿದನು. ನಂತರ ಮೇಲೆ ಕಾಣಿಸಿರುವ ಸಾರ್ವಜನಿಕರು ಲಾರಿಯನ್ನು ಚಾಲಕನ ಸಹಾಯದಿಂದ ತೆಗೆಯಲು ಪ್ರಯತ್ನಿಸಿದ್ದರೂ ಲಾರಿಯನ್ನು ರಸ್ತೆಗೆ ತೆಗೆಯಲಾಗದ ಕಾರಣ ಚಾಲಕ ಮತ್ತು ಅವನ ಸಹಪಾಟಿಗಳಾದ ಎನ್. ನಾಗೇಶ್, ಯೋಗೇಶ್, ಡಿ.ಕೆ. ದಿಲೀಪ್, ಮಜೀದ್ ಎಂಬುವವರನ್ನು ಬೆಳಗ್ಗಿನ ಜಾವ 12.20ರ ಸಮಯದಲ್ಲಿ ಪೊಲೀಸರಿಗೆ ಹಾಜರುಪಡಿಸಿ ನಂತರ ಪೊಲೀಸರೊಂದಿಗೆ ಲಾರಿ ಇರುವ ಸ್ಥಳಕ್ಕೆ ಹೋಗಿ ಅಲ್ಲಿಯವರಾದ ಸುಗುಣ ಎಂಬುವವರ ಟ್ರೈಲರ್ ನಿಂದ ಲಾರಿಯನ್ನು ಹೊರಗೆಳೆದು ಚಾಲಕನಾದ ನಾಗೇಶ್ ರೊಂದಿಗೆ ಸುಮಾರು 3.00 ಗಂಟೆಗೆ

ಮೂರ್ನಾಡು ಪೊಲೀಸ್ ಠಾಣೆಗೆ ಒಪ್ಪಿಸಿದರು. ಪ್ರಕರಣ ನಡೆದ ಸ್ಥಳವು ಮಡಿಕೇರಿ ಗ್ರಾಮಾಂತರ ಠಾಣೆಯ ವ್ಯಾಪ್ತಿಯಲ್ಲಿ ಆಗಿರುವುದರಿಂದ ಮೂರ್ನಾಡು ಠಾಣೆ ಪೊಲೀಸರು ಮಡಿಕೇರಿ ಗ್ರಾಮಾಂತರ ಠಾಣೆ ಪೊಲೀಸ್ ಉಪ ನಿರೀಕ್ಷಕರಿಗೆ ತಿಳಿಸಿರುವುದರಿಂದ ಮಡಿಕೇರಿ ಗ್ರಾಮಾಂತರ ಆರಕ್ಷಕ ಉಪ ನಿರೀಕ್ಷಕರು ಮೂರ್ನಾಡು ಆರಕ್ಷಕ ಠಾಣೆಗೆ ಬಂದಾಗ ಮೂರ್ನಾಡ್ ಉಪ ಠಾಣೆಯ ಎದುರುಗಡೆ ಗೇಟಿನ ಹತ್ತಿರ ರಸ್ತೆ ಬದಿಯಲ್ಲಿ ಕೆಎ-06-1662 ನಂಬರಿನ ಲಾರಿ ನಿಂತಿದ್ದು ಲಾರಿಯ ಹತ್ತಿರ ಈ ಪ್ರಕರಣದ ಫಿರ್ಯಾದಿ ಬಿ.ಎಸ್. ಗೌತಮ್ ಮತ್ತು ಇತರರು ಹಾಜರಿದ್ದು ದಿನಾಂಕ: 27.6.2004 ರಂದು ರಾತ್ರಿ ಅಕ್ರಮವಾಗಿ ಸ್ಪಿರಿಟ್ ಸಾಗಾಣಿಕೆ ಮಾಡುತ್ತಿದ್ದ ಲಾರಿಯನ್ನು ಹಿಂಬಾಲಿಸಿ ಹಿಡಿದು ಮೂರ್ನಾಡು ಠಾಣೆಗೆ ಒಪ್ಪಿಸಿದ್ದ ಲಾರಿಯಾಗಿರುತ್ತದೆ ಎಂಬುದಾಗಿ ತಿಳಿಸಿ ಲಾರಿಯನ್ನು ತೋರಿಸಿಕೊಟ್ಟರು. ಸದರಿ ಲಾರಿಯ ಬಾಡಿಯಲ್ಲಿ ಪರಿಶೀಲಿಸಲಾಗಿ ನೀಲಿ ಬಣ್ಣದ ಸಾರಾಯಿ ಪ್ಯಾಕೇಟ್ ತುಂಬುವ ಖಾಲಿ ಕ್ರೇಟ್‌ಗಳನ್ನು ಜೋಡಿಸಿಟ್ಟಿದ್ದು ಮತ್ತು ಇದರಲ್ಲಿ ತಲಾ ಒಂದು ಕ್ಯಾನಿನಲ್ಲಿ 35 ಲೀಟರಿನಂತೆ 35 ಬಿಳಿ ಪ್ಲಾಸ್ಟಿಕ್ ಕ್ಯಾನ್ ಗಳಿರುವುದು ಕಂಡು ಬಂತು. ಸದರಿ ಕ್ಯಾನ್‌ಗಳಿಂದ ಸ್ಯಾಂಪಲ್ ತೆಗೆದು ಬಾಟಲಿಗಳ ಬಾಯಿಯನ್ನು ಮುಚ್ಚಳದಿಂದ ಮುಚ್ಚಿ ಬಿಳಿ ಬಟ್ಟೆಯಿಂದ ಸುತ್ತಿ ಅರಗು ಹಾಕಿ ಪಂಚರ ಸಮಕ್ಷಮ ಸೀಲ್ ಮಾಡಲಾಯಿತು. ಹಾಗೂ ಲಾರಿಯಲ್ಲಿದ್ದ 70 ಕ್ರೇಟ್‌ಗಳನ್ನು ಮತ್ತು ಒಂದು ಟಾರ್ಪಾಲ್ ಮತ್ತು ಲಾರಿ ನಂ. ಕೆಎ-06-1662ನ್ನು ಪೊಲೀಸ್ ಅಧೀನಕ್ಕೆ ತೆಗೆದುಕೊಂಡು ಮಡಿಕೇರಿ ಗ್ರಾಮಾಂತರ ಉಪ ನಿರೀಕ್ಷಕರ ಮೊಕದ್ದಮೆ ಸಂಖ್ಯೆ: 76/2004, ದಿನಾಂಕ: 28.6.2004 ರಂದು ಅಬಕಾರಿ ಕಾಯ್ದೆ 1965ರ 32, 34, 38ಎ, 43ಎರ ಪ್ರಕಾರ ಮೊಕದ್ದಮೆಯನ್ನು ದಾಖಲು ಮಾಡಿಕೊಂಡಿರುತ್ತಾರೆ. ಹಾಗೂ ಮುಂದಿನ ಕ್ರಮದ ಬಗ್ಗೆ ಸೂಕ್ತ ಮಹಜರು ಮೂಲಕ ಮಡಿಕೇರಿ ಉಪ ವಲಯದ ಉಪ ನಿರೀಕ್ಷಕರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ಮೊಕದ್ದಮೆಯನ್ನು ದಾಖಲಿಸುವ ಸಮಯದಲ್ಲಿ ವಾಹನದ ಚಾಲಕನಿಂದ ಪಡೆದುಕೊಳ್ಳಲಾದ ಆರ್.ಸಿ. ಪುಸ್ತಕದಲ್ಲಿದ್ದಂತೆ ಶ್ರೀ ಪೃಥ್ವಿ ನಾರಾಯಣ, ತಂದೆ ಲೇಟ್ ಹೆಚ್.ಜಿ. ನಾರಾಯಣ, ಬಿ.ಎಂ. ರಸ್ತೆ, ಹಾಸನ ರವರಿಗೆ 43ಬಿರ ಪ್ರಕಾರ ದಿನಾಂಕ: 7.7.2004 ರಂದು ಕಾರಣ ಕೇಳಿ ನೋಟೀಸ್ ನೀಡಲಾಯಿತು.

ಅದರಂತೆ ದಿನಾಂಕ: 7.7.2004 ರಂದು ಶ್ರೀ ಪೃಥ್ವಿ ನಾರಾಯಣ್, ತಂದೆ ಲೇಟ್ ಹೆಚ್.ಜೆ. ನಾರಾಯಣ ರವರ ಅಧಿಕೃತ ಹಕ್ಕು ಪತ್ರ ಪಡೆದವರಾದ (ಜಿ.ಪಿ.ಎ. ಹೋಲ್ಡರ್) ಶ್ರೀ ಪರಮೇಶ್, ತಂದೆ ಹರದೇಗೌಡ, ಮಾರ್ಕೆಟ್ ರಸ್ತೆ, ಕುಶಾಲನಗರ ಇವರು ಅರ್ಜಿಯನ್ನು ಸಲ್ಲಿಸಿ ವಾಹನ ಸಂಖ್ಯೆ: ಕೆಎ-06-1662ರ ಅಧಿಕೃತ ಮಾಲೀಕರಾದ ಶ್ರೀ ಪೃಥ್ವಿ ನಾರಾಯಣ ರವರಿಗೆ ಸೇರಿದ್ದಾಗಿದ್ದು, ಸದರಿ ವಾಹನವನ್ನು ಶ್ರೀ ಗುರುಮೂರ್ತಿ, 2003-04ನೇ ಸಾಲಿನ ಸಾರಾಯಿ ಗುತ್ತಿಗೆದಾರರು, ಕೊಡಗು ಜಿಲ್ಲೆ ಇವರಿಗೆ ಬಾಡಿಗೆಗೆ ಕೊಟ್ಟಿದ್ದೆನು. ಇದರಲ್ಲಿದ್ದ ವಸ್ತುವಿಗೂ ನನಗೂ ಯಾವುದೇ ಸಂಬಂಧವಿಲ್ಲ ಎಂದು ಹಾಗೂ ವಾಹನವನ್ನು ಮಧ್ಯಂತರ ಬಿಡುಗಡೆ ಮಾಡಿಕೊಡುವಂತೆ ಕೋರಿರುತ್ತಾರೆ. ಇದಲ್ಲದೆ ದಿನಾಂಕ: 27.6.2004 ರಂದು ಹಾಗೂ 28.6.2004 ರಂದು ಸದರಿ ವಾಹನ ಹಾಗೂ ಚಾಲಕನ ಮೇಲೆ ಏನೇನು ನಡೆಯಿತು ಎಂಬುದನ್ನು ಈ ಕೆಳಗಿನಂತೆ ಶ್ರೀ ಪರಮೇಶ್ ರವರು ತಿಳಿಸಿರುತ್ತಾರೆ.

ದಿನಾಂಕ: 27.6.2004 ರಂದು ಸದರಿ ಲಾರಿಯಲ್ಲಿ ವಿರಾಜಪೇಟೆ ಸಾರಾಯಿ ಡಿಪೋದಿಂದ ಕುಶಾಲನಗರ ಸಾರಾಯಿ ಸಂಸ್ಕರಣ ಘಟಕಕ್ಕೆ ಸಾರಾಯಿ ತೆಗೆದುಕೊಂಡು ಬರಲು ಚಾಲಕನಾದ ನಾಗೇಶ್ ಮತ್ತು ದಿಲೀಪ್ ಹಾಗೂ ಇತರ ಇಬ್ಬರು ಸಿಬ್ಬಂದಿಗಳೊಂದಿಗೆ, ಲಾರಿ ವಿರಾಜಪೇಟೆಯನ್ನು ಬಿಟ್ಟಿರುತ್ತದೆ. ಸದರಿ ಲಾರಿಯು ರಾತ್ರಿ 9.30 ಗಂಟೆಯಾದರೂ ಕುಶಾಲನಗರ ಸಾರಾಯಿ ಸಂಸ್ಕರಣ ಘಟಕಕ್ಕೆ ಬಾರದ ಕಾರಣ ತಪಾಸಣೆ ಮಾಡಲಾಗಿ ರಾತ್ರಿ ಸುಮಾರು 10.00 ಗಂಟೆಯಲ್ಲಿ ದೂರವಾಣಿ ಕರೆ ಬಂದು ನಿಮ್ಮ ಲಾರಿ ಮತ್ತು ಸಿಬ್ಬಂದಿಯನ್ನು ಅಪಹರಿಸಿದ್ದೇವೆ, ಬಿಡುಗಡೆಗೊಳಿಸಬೇಕೆಂದರೆ ರೂ.5,00,000/- ಗಳನ್ನು ಕೊಡಬೇಕೆಂದು ಒತ್ತಾಯಿಸಿದ್ದಾರೆ. ಈ ಸಂಬಂಧವಾಗಿ ದಿನಾಂಕ: 27.6.2004 ರಂದು ವಿರಾಜಪೇಟೆ ನಗರ ಠಾಣೆಗೆ ದೂರು ಸಲ್ಲಿಸಿರುತ್ತೇನೆ. ದಿನಾಂಕ: 28.6.2004 ರಂದು ಮೂರ್ನಾಡು ಉಪ ಠಾಣೆಗೆ ಅಪಹರಣಕಾರರು ವಾಹನ ಮತ್ತು ಸಿಬ್ಬಂದಿಯನ್ನು ಬೆಳಿಗ್ಗೆ ಸುಮಾರು 8.30ರ ಸಮಯದಲ್ಲಿ ಒಪ್ಪಿಸಿರುತ್ತಾರೆ. ಈ ಸಂಬಂಧ ವಾಹನವನ್ನು ವಶಪಡಿಸಿಕೊಂಡಿರುತ್ತಾರೆ. ಸದರಿ ಲಾರಿಯಲ್ಲಿ ನನ್ನ ವ್ಯವಹಾರ ಉದ್ಯೋಗ ನಡೆಯಬೇಕಾಗಿದೆ. ಈ ಲಾರಿಯನ್ನು ವಶಪಡಿಸಿಕೊಂಡಿರುವುದರಿಂದ ನನ್ನ ದೈನಂದಿನ ಜೀವನಕ್ಕೆ ಬೇಕಾದ ವರಮಾನಕ್ಕೆ ತೊಂದರೆಯಾಗಿರುತ್ತದೆ. ಆದುದರಿಂದ ಈ ವಿಚಾರದಲ್ಲಿ ನಾನು ನಿರಪರಾಧಿಯಾಗಿದ್ದೇನೆ. ಹಾಗೂ ಸದರಿ ವಾಹನಕ್ಕೆ ತಾವು ವಿಧಿಸುವ ಷರತ್ತುಗಳಿಗೂ ಬದ್ಧನಾಗಿರುತ್ತೇನೆ. ಹಾಗೂ ತಾವು ವಿಧಿಸುವ ಭದ್ರತೆಯನ್ನು ನೀಡಿ ವಾಹನವನ್ನು ಪಡೆಯಲು ಬದ್ಧನಾಗಿರುತ್ತೇನೆ ಎಂದು ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ಕೋರಿಕೊಂಡಿರುತ್ತಾರೆ.

ಆದರೆ ಮೊಕದ್ದಮೆ ದಾಖಲಾತಿಗಳನ್ನು ಪರಿಶೀಲಿಸಿದಾಗ ಫಿರ್ಯಾದು ಹಾಗೂ ಸ್ವತ್ತನ್ನು ವಶಪಡಿಸಿಕೊಂಡಾಗ ಬರೆದಿರುವ ಮಹಜರಿನಲ್ಲಿ ಈ ಮೇಲೆ ಕಾಣಿಸಿರುವ ಅಂಶಗಳು ಕಂಡು ಬಂದಿರುವುದಿಲ್ಲ. ಆದುದರಿಂದ ಈ ವಿಚಾರವನ್ನು ಪೊಲೀಸರು ವಿವರವಾಗಿ ವಿಚಾರಣೆ ಮಾಡಲು ಹಾಗೂ ಸೂಕ್ತ ಕ್ರಮ ಕೈಗೊಳ್ಳಲು ಪೊಲೀಸ್ ಇಲಾಖೆಗೆ ಅಧಿಕಾರ ಇರುತ್ತದೆ.

ವಾಹನದ ಮಾಲೀಕರಾದ ಶ್ರೀ ಪೃಥ್ವಿನಾರಾಯಣ ರವರ ಪರವಾಗಿ ನೀಡಿದ ಅರ್ಜಿ ದಿನಾಂಕ: 7.7.2004 ರಲ್ಲಿ ಕೇಳಿರುವಂತೆ ವಶಪಡಿಸಿಕೊಂಡಿರುವ ವಾಹನ ಸಂಖ್ಯೆ: ಕೆಎ-06-1662 ರನ್ನು ಮಧ್ಯಂತರ ಬಿಡುಗಡೆ ಮಾಡಲು ಒಂದು ಲಕ್ಷ ಮೌಲ್ಯದ ಡೆಪಾಸಿಟ್ ನೀಡಿದರೆ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲಾಗುವುದೆಂದು ಈ ಪ್ರಾಧಿಕಾರ ವಾಹನ ಮಾಲೀಕರಿಗೆ ತಿಳಿಸಿದಾಗ ದಿನಾಂಕ: 8.7.2004 ರಂದು ಶ್ರೀ ಪೃಥ್ವಿನಾರಾಯಣ ರವರಿಂದ ಒಂದು ಲಕ್ಷ ಮೌಲ್ಯದ ಫಿಕ್ಸೆಡ್ ಡೆಪಾಸಿಟ್ ಹಣವನ್ನು ಕರ್ನಾಟಕ ಬ್ಯಾಂಕ್ ಲಿ. ಕೊಡಿಗೆ ಶಾಖೆಯಿಂದ ಭದ್ರತೆಗಾಗಿ ಪಡೆದು ವಾಹನವನ್ನು ಶ್ರೀ ಪೃಥ್ವಿನಾರಾಯಣ, ತಂದೆ ಹೆಚ್.ಜಿ. ನಾರಾಯಣ ರವರ ಅಧಿಕೃತ ಹಕ್ಕುದಾರರಾದ ಶ್ರೀ ಪರಮೇಶ್, ತಂದೆ ಹರದೇಗೌಡ, ಮಾರ್ಕೆಟ್ ರಸ್ತೆ, ಕುಶಾಲನಗರ ಇವರಿಗೆ ಈ ಪ್ರಾಧಿಕಾರದಲ್ಲಿ ಕೆಲವು ಷರತ್ತುಗಳನ್ನು ವಿಧಿಸಿ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸಲಾಗಿರುತ್ತದೆ.

ಹಾಗೂ ವಶಪಡಿಸಿಕೊಂಡ 35 ಕ್ಯಾನುಗಳಲ್ಲಿದ್ದ ದ್ರವವನ್ನು ಮಾದರಿಗಾಗಿ ತೆಗೆದು ದಿನಾಂಕ: 19.7.2004 ರಂದು ಮೈಸೂರು ರಾಸಾಯನಿಕ ತಜ್ಞರಲ್ಲಿಗೆ ಕಳಿಸಲಾಗಿದ್ದು, ಅವರ ವರದಿ ದಿನಾಂಕ: 28.7.2004 ರಲ್ಲಿ ಸದರಿ ದ್ರವವು ಶೇ.80 ಸಾಂದ್ರತೆಯನ್ನು ಹೊಂದಿದ್ದು, ಮದ್ಯಸಾರವೆಂದು ದೃಢಪಟ್ಟಿರುವುದರಿಂದ ದೃಢೀಕರಣ ಪತ್ರ ನೀಡಿರುತ್ತಾರೆ. ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಒಂದೇ ವಾಹನದಲ್ಲಿ ಬೇರೆ ಮೊಕದ್ದಮೆಯಲ್ಲಿ ವಶಪಡಿಸಿಕೊಳ್ಳಲಾದ ಮದ್ಯಸಾರವನ್ನು ಸಾಗಾಣಿಕೆ ಮಾಡಲು ಅನುಕೂಲವಾಗಿರುತ್ತದೆ ಎಂದು ದಿನಾಂಕ: 4.8.2004 ರಂದು ಈ ಪ್ರಾಧಿಕಾರದ ಆದೇಶದಂತೆ ರಾಸಾಯನಿಕ ವಿಶ್ಲೇಷಕರ ವರದಿಯನ್ನು ಕಾಯ್ದಿರಿಸಿ ನಿಯಮ 43ಎ ರಂತೆ 35 ಕ್ಯಾನ್‌ನಲ್ಲಿದ್ದ 1225 ಲೀ. ಮದ್ಯಸಾರವನ್ನು ಸಹಾ ಮುಟ್ಟುಗೋಲು ಹಾಕಿಕೊಂಡು ದಿನಾಂಕ: 4.8.2004 ರಂದು ರಹದಾರಿ ಸಂಖ್ಯೆ: 1/17510/04-05ರ ಮುಖಾಂತರ ಮೆ: ಮೈಸೂರು ಸಕ್ಕರೆ ಕಂ. ನಿಯಮಿತ ಸಾರಾಯಿ ತಯಾರಿಕಾ ಘಟಕ, ಮಂಡ್ಯ ರವರಿಗೆ ಕೊಡಲಾಗಿರುತ್ತದೆ. ಸ್ವೀಕೃತಿಯನ್ನು ಅವರಿಂದ ಪಡೆಯಲಾಗಿದೆ.

ಹಾಗೂ ದಿನಾಂಕ: 31.1.2005 ರಂದು ಸದರಿ ವಾಹನದ ಮಾಲೀಕರ ಅಧಿಕೃತ ಹಕ್ಕು ಪತ್ರ ಪಡೆದವರಾದ ಶ್ರೀ ಪರಮೇಶ್, ತಂದೆ ಹರದೇಗೌಡ, ಕುಶಾಲನಗರ ಇವರು ಅರ್ಜಿಯನ್ನು ಸಲ್ಲಿಸಿ ಸದರಿ ಮೊಕದ್ದಮೆಯನ್ನು ನಡೆಸಲು ತನ್ನಿಂದ ಸಾಧ್ಯವಿರುವುದಿಲ್ಲ ಏಕೆಂದರೆ ನನ್ನ ಉದ್ಯೋಗ ವ್ಯಾಪಾರವಾಗಿದ್ದು, ಸಮಯಕ್ಕೆ ಸರಿಯಾಗಿ ನ್ಯಾಯಾಲಯಕ್ಕೆ ಹಾಜರಾಗಲು ಸಾಧ್ಯವಾಗುವುದಿಲ್ಲ. ಆದುದರಿಂದ ವಾಹನವನ್ನು ಕಾನೂನು ರೀತಿಯಲ್ಲಿ ವಿಲೇವಾರಿ ಮಾಡಲು ನನ್ನಿಂದ ಯಾವುದೇ ಅಭ್ಯಂತರವಿರುವುದಿಲ್ಲ ಎಂದು ಇದು ನನ್ನ ಸ್ವಂತ ಇಚ್ಛೆ ಎಂದು ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಅದರಂತೆ ಸದರಿ ದ್ರವವು ದಿನಾಂಕ: 28.7.2004 ರಂದು ರಾಸಾಯನಿಕ ದೃಢೀಕರಣ ಪತ್ರದ ಪ್ರಕಾರ ಮದ್ಯಸಾರ ಎಂದು ದೃಢಪಟ್ಟಿರುವುದರಿಂದ ಸದರಿ ಆಸಾಮಿಯು ತಿಳಿದೆ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆದುದರಿಂದ ಸದರಿ ವಾಹನವನ್ನು ತೆರೆದ ಪ್ರದೇಶದಲ್ಲಿ ನಿಲ್ಲಿಸಿ ಗಾಳಿ, ಮಳೆ, ಬಿಸಿಲು ಪ್ರಕೃತಿಯ ವಿಕೋಪಕ್ಕೆ ಅದರ ಬಿಡಿ ಭಾಗಗಳು ಹಾಳಾಗುವ ಸಂಭವವಿದ್ದು, ಸರ್ಕಾರಕ್ಕೆ ಬರುವ ಆದಾಯವು ಕೈತಪ್ಪುವ ಸಾಧ್ಯತೆ ಇರುವುದರಿಂದ ಮತ್ತು ಸದರಿ ವಾಹನದ ಮಾಲೀಕರ ಅಧಿಕೃತ ಹಕ್ಕು ಪತ್ರದಾರರು ನೀಡಿರುವ ಹೇಳಿಕೆ ಪ್ರಕಾರ ಇನ್ನು ಯಾರು ಅರ್ಜಿ ಸಲ್ಲಿಸುವುದಿಲ್ಲ ಎಂದು ತಿಳಿದು ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವಾಗಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:248/2004-05, ದಿನಾಂಕ: 1ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಶೀಲಿಸಲಾಗಿ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಎ ರ ಅಡಿಯಲ್ಲಿ ಸರ್ಕಾರದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಠಾಣೆ, ಮಡಿಕೇರಿ ರವರ ಮೊಕದ್ದಮೆ ಸಂಖ್ಯೆ: 76/2004, ದಿನಾಂಕ: 28.6.2004 ರಲ್ಲಿ ವಶಪಡಿಸಿಕೊಂಡ ಲಾರಿ ನಂ.ಕೆಎ-06-1662 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 43 (ಎ) (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 1.2.2005 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ, ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ಕರ್ನಾಟಕ ರಾಜ್ಯ ಅಬಕಾರಿ (ಮುಟ್ಟುಗೋಲು ಹಾಕಿಕೊಂಡ ವಸ್ತುಗಳ ವಿಲೇವಾರಿ) 1697ರ ನಿಯಮದಂತೆ ವಿಲೇವಾರಿ ಮಾಡಲಾಗುವುದೆಂದು ಆದೇಶಿಸಿದೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಪಿ.ಆರ್. 404 ಕೊಡಗು ಜಿಲ್ಲೆ, ಮಡಿಕೇರಿ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:84/2004-05, ದಿನಾಂಕ: 4ನೇ ಫೆಬ್ರವರಿ 2005**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀನಷರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು:** ಆರಕ್ಷಕ ಉಪ ನಿರೀಕ್ಷಕರು, ಭಾಗಮಂಡಲ ಆರಕ್ಷಕ ಠಾಣೆ.

**ವಿರುದ್ಧ**

**ಅಪರಾಧಿಗಳು:** 1. ಫ್ರಾನ್ಸಿಸ್ ಥೋಮಸ್, ತಂದೆ ಜೊಸೆಫ್ ಥೋಮಸ್, ಕಾಂಜರಥಾನ್ ಹೌಸ್, ಮುಡೇರಿ ನಗರ, ಕಪ್ಪೆಟ್ಟಿ, ಮೈತ್ರಿ ತಾ: ವೈಯನಾಡು, ಕೇರಳ
2. ವಿಜು ಟಿ.ಎಸ್., ಲಾರಿ ಚಾಲಕ, ಕೇರಳ ರಾಜ್ಯ.
3. ಸಾಬು, ಏಜೆಂಟ್ ತಿರುವನಂತಪುರ, ಕೇರಳ ರಾಜ್ಯ.

**ಪ್ರಕರಣದ ಮುಖ್ಯಾಂಶಗಳು:**

ಭಾಗಮಂಡಲ ಪೊಲೀಸ್ ಠಾಣೆಯ ಉಪ ನಿರೀಕ್ಷಕರು ಮತ್ತು ಸಿಬ್ಬಂದಿಯವರು ದಿನಾಂಕ: 10.11.2004 ರಂದು ಸಾಯಂಕಾಲ ಮಡಿಕೇರಿ ತಾಲ್ಲೂಕಿನ ಚಂಬೇರಿ ಅರಣ್ಯ ತನಿಖಾ ಠಾಣೆ ಗೇಟ್‌ನಲ್ಲಿ ಕರ್ತವ್ಯದಲ್ಲಿರುವಾಗ ಸಮಯ 7.00 ಗಂಟೆಯಲ್ಲಿ ದೊರೆತ ಖಚಿತ ವರ್ತಮಾನದ ಮೇರೆಗೆ ಭಾಗಮಂಡಲ ಕಡೆಯಿಂದ ಬರುತ್ತಿದ್ದ ಟಾಟಾ 709-ಟಿ.ಎನ್.-69-ಕೆ-8159 ಸಂಖ್ಯೆಯ ಲಾರಿಯು ಬರುತ್ತಿದ್ದು, ಅದನ್ನು ಅನುಮಾನದ ಮೇಲೆ ತಡೆದು ನಿಲ್ಲಿಸಿರುತ್ತಾರೆ. ಲಾರಿಯನ್ನು ಪರಿಶೀಲಿಸಲಾಗಿ ಲಾರಿಯು ಖಾಲಿಯಾಗಿದ್ದು, ಲಾರಿಯ ಚಾಸೀಯ ಮೇಲ್ಭಾಗದಲ್ಲಿ ಟಾರ್ಚ್‌ನ ಬೆಳಕಿನಲ್ಲಿ ನೋಡಲಾಗಿ ರಂಧ್ರದಲ್ಲಿ ಬಿಳಿ ಬಿಳಿಯಾಗಿ ಕಾಣುತ್ತಿದ್ದು, ಸಂಶಯಗೊಂಡು ಬಾಡಿಯ ಹಲಗೆಗಳನ್ನು ತೆಗೆದು ನೋಡಲಾಗಿ ಅದರ ಒಳಗಡೆ ಸಾಲಾಗಿ ಮದ್ಯಸಾರ ತುಂಬಿಸಲಾದ ಕ್ಯಾನುಗಳನ್ನು ಜೋಡಿಸಿ ಇಟ್ಟಿರುವುದು ಕಂಡು ಬಂದಿರುತ್ತದೆ. ಕೂಡಲೇ ವಾಹನದ ಕ್ಯಾಬೀನ್‌ನಲ್ಲಿದ್ದವರನ್ನು ವಿಚಾರಿಸಲು ಹೋದಾಗ ಅಲ್ಲಿದ್ದ ಮೂರು ಜನರ ಪೈಕಿ ಇಬ್ಬರು ಓಡಿಹೋಗಿದ್ದು, ಒಬ್ಬನನ್ನು ಹಿಡಿದು ವಿಚಾರಿಸಲಾಗಿ ಆತನ ಹೆಸರು ಫ್ರಾನ್ಸಿಸ್ ಬಿನ್ ಥೋಮಸ್, ವಾಹನದ ಕ್ಲೀನರ್, ಮುಂಡೇರಿ, ವೈನಾಡು ತಾಲ್ಲೂಕು, ಕೇರಳ ಎಂದು ತಿಳಿಸಿರುತ್ತಾನೆ. ಓಡಿ ಹೋದವರ ಬಗ್ಗೆ ವಿಚಾರಿಸಲಾಗಿ ಲಾರಿಯ ಡ್ರೈವರ್ ಹಾಗೂ ಇತರರು ಕುಳಿತಿದ್ದು, ಸೀಟಿನ ಕೆಳಗಡೆ ಪರಿಶೀಲಿಸಲಾಗಿ ಅಲ್ಲಿ ವ್ಯವಸ್ಥಿತವಾಗಿ 8 ಬಿಳಿಯ ಕ್ಯಾನುಗಳಲ್ಲಿ ಮದ್ಯಸಾರವನ್ನು ತುಂಬಿ ಇರಿಸಿಕೊಂಡಿರುವುದು ಕಂಡು ಬಂದಿರುತ್ತದೆ. ಲಾರಿಯನ್ನು ಪರಿಶೀಲಿಸಲಾಗಿ ಇದರ ರಿಜಿಸ್ಟ್ರೇಷನ್ ನಂ.ಟಿಎನ್-69-ಕೆ-8159 ಆಗಿರುತ್ತದೆ. ಇದು 1990ರ ಮಾದರಿಯಾಗಿರುತ್ತದೆ. ಇಂಜಿನ್ ನಂ: 497ಬಿ22ಡಿಟಿಕ್ಯೂ741069 ಆಗಿದ್ದು, ಚಾಸೀಸ್ ನಂ. 3860400ಟಿ0813969 ಆಗಿರುತ್ತದೆ. ಪಂಚರ ಸಮಕ್ಷಮ ಲಾರಿಯಲ್ಲಿದ್ದ ಮದ್ಯಸಾರ ತುಂಬಿಸಲಾಗಿದ್ದ ಕ್ಯಾನುಗಳನ್ನು ಎಣಿಸಿ ನೋಡಲಾಗಿ

1. 35 ಲೀ. ಸಾಮರ್ಥ್ಯದ 27 ಕ್ಯಾನುಗಳು
2. 20 ಲೀ. ಸಾಮರ್ಥ್ಯದ 3 ಕ್ಯಾನುಗಳು
3. 10 ಲೀ. ಸಾಮರ್ಥ್ಯದ 5 ಕ್ಯಾನುಗಳು
4. 5 ಲೀ. ಸಾಮರ್ಥ್ಯದ 1 ಕ್ಯಾನು

ಸ್ಥಳದಲ್ಲಿದ್ದ ಲಾರಿಯ ಕ್ಲೀನರ್‌ನನ್ನು ಮದ್ಯಸಾರ ಸಾಗಾಟದ ಬಗ್ಗೆ ರಹದಾರಿ ಪತ್ರ ದಾಖಲೆಗಳ ಬಗ್ಗೆ ವಿಚಾರಿಸಲಾಗಿ ಯಾವುದೇ ದಾಖಲೆ ಇರುವುದಿಲ್ಲ ಎಂದು ತಿಳಿಸಿರುತ್ತಾರೆ. ಆದ್ದರಿಂದ ಅಕ್ರಮ ಮದ್ಯಸಾರ ಸಾಗಾಟ ಪ್ರಕರಣವೆಂದು ಪರಿಗಣಿಸಿ ಆರೋಪಿಯನ್ನು ಬಂಧಿಸಿ ಸ್ವತ್ತುಗಳನ್ನು ವಶಕ್ಕೆ ತೆಗೆದುಕೊಂಡು ಮದ್ಯಸಾರದ ಮಾದರಿ ಬಾಟಲಿಗಳನ್ನು ತೆಗೆದುಕೊಂಡು ಸ್ಥಳ ಮಹಜರು ನಡೆಸಿ ಠಾಣೆಯ ಕ್ರೈಂ ನಂ:51/2004, ದಿನಾಂಕ: 10.11.2004 ರಂತೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 14, 32, 34, 38ರ ಅಡಿಯಲ್ಲಿ ಆರೋಪಿಗಳ ವಿರುದ್ಧ ಪ್ರಕರಣ ದಾಖಲಾಗಿರುತ್ತದೆ. ನಂತರ ಅಬಕಾರಿ ಉಪ ನಿರೀಕ್ಷಕರು, ಉಪ ವಲಯ, ಮಡಿಕೇರಿ ಇವರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ವಾಹನದ ಮಾಲೀಕರನ್ನು ಪತ್ತೆ ಹಚ್ಚಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ತೂತುಕುಡಿ, ತಮಿಳುನಾಡು ರಾಜ್ಯ ಇವರಿಗೆ ದಿನಾಂಕ: 15.12.2004 ರಂದು ಪತ್ರ ಬರೆಯಲಾಗಿದ್ದು, ಅವರ ಪತ್ರ ದಿನಾಂಕ: 20.12.2004 ರಲ್ಲಿ ಸದರಿ ನಂಬರಿನ ವಾಹನವು ಅವರ ಕಛೇರಿಯಲ್ಲಿ ನೋಂದಣಿಯಾಗುವುದಿಲ್ಲವಾಗಿ ದೃಢೀಕರಣ ಪತ್ರ ನೀಡಿರುತ್ತಾರೆ.

ಹಾಗೂ ಸದರಿ ವಾಹನದಲ್ಲಿ ವಶಪಡಿಸಿಕೊಳ್ಳಲಾದ ದ್ರವವನ್ನು ಬೆಂಗಳೂರು ರಾಸಾಯನಿಕ ತಜ್ಞರಲ್ಲಿಗೆ ಕಳಿಸಲಾಗಿದ್ದು, ವಿಶ್ಲೇಷಣಾ ವರದಿ ಬರಲು ಬಾಕಿ ಇರುತ್ತದೆ.

ಮೊಕದ್ದಮೆ ದಾಖಲಾಗಿ 3 ತಿಂಗಳು ಕಳೆಯುತ್ತಾ ಬಂದಿದ್ದರೂ ಈ ವರೆಗೂ ವಾಹನಕ್ಕೆ ಸಂಬಂಧಪಟ್ಟ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರಕ್ಕೆ ಹಾಜರಾಗಿ ಅರ್ಜಿ ಸಲ್ಲಿಸಿರುವುದಿಲ್ಲ ಮತ್ತು ಸದರಿ ಮದ್ಯಸಾರ ಸಾಗಾಣಿಕೆ ಬಗ್ಗೆ ಯಾವುದೇ ದಾಖಲಾತಿಗಳನ್ನು ಹಾಜರು ಪಡಿಸಿರುವುದಿಲ್ಲ.

1965ನೇ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಪಡಿಸುವಾಗ ಅಪರಾಧಿಯು ಪತ್ತೆ ಆಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣ ಪತ್ತೆಹಚ್ಚಿ ಒಂದು ತಿಂಗಳು ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿ ಸ್ವತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆ ಎಂದು ಸಾಕ್ಷ್ಯಾಧಾರಗಳೊಂದಿಗೆ ಅರ್ಜಿಯನ್ನು ಸಲ್ಲಿಸದಿದ್ದಲ್ಲಿ ಸದರಿ ಸ್ವತ್ತುಗಳು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 (ಸಿ) ಅಡಿಯಲ್ಲಿ ಜಪ್ತುಪಡಿಸಿದ ಅಕ್ರಮ ಮದ್ಯಸಾರ ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ. ಹಾಗೂ ಸದರಿ ವಾಹನಕ್ಕೆ ಸಂಬಂಧಪಟ್ಟವರು ಪ್ರಾಧಿಕಾರಕ್ಕೆ ಇಲ್ಲಿಯವರೆಗೆ ಹಾಜರಾಗದಿದ್ದ ಕಾರಣ ಅಬಕಾರಿ ಕಾನೂನನ್ನು ತಿಳಿದೇ ಈ ರೀತಿ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳಿಂದ ಸ್ಥಳ ಮಹಜರು, ಪ್ರಥಮ ಮಾಹಿತಿ ವರದಿ, ಹಾಗೂ ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯ ರವರ ವರದಿ ದಿನಾಂಕ: 4.2.2005 ರಂತೆ ಪರಿಶೀಲನೆ ಮಾಡಿದಲ್ಲಿ ದಿನಾಂಕ: 10.11.2004 ರಂದು ಲಾರಿ ನಂ: ಟಾಟ 709 ಟಿ.ಎನ್.-69-ಕೆ-8159 ರಲ್ಲಿ ಆರೋಪಿಯು ಅಕ್ರಮವಾಗಿ 1,060 ಲೀ. ಮದ್ಯಸಾರವನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಸ್ವತಃ ವಾಹನ ಮಾಲೀಕರೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಈ ಪ್ರಾಧಿಕಾರವು ತೀರ್ಮಾನಕ್ಕೆ ಬರಬೇಕಾಗಿರುತ್ತದೆ. ವಾಹನವನ್ನು ತೆರೆದ ಪ್ರದೇಶದಲ್ಲಿ ಅದು ಬಿಸಿಲು, ಮಳೆ, ಹವಾಮಾನ ವೈಪರೀತ್ಯಗಳಿಗೆ ವಾಹನವು ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಸಂಭವವಿದ್ದು, ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:132/2003-04, ದಿನಾಂಕ: 4ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಶೀಲಿಸಲಾಗಿ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಎ ರ ಅಡಿಯಲ್ಲಿ ಸರ್ಕಾರದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಭಾಗಮಂಡಲ ಪೊಲೀಸ್ ಠಾಣೆ, ರವರ ಮೊಕದ್ದಮೆ ಸಂಖ್ಯೆ: 51/2004, ದಿನಾಂಕ: 10.11.2004 ರಲ್ಲಿ ವಶಪಡಿಸಿಕೊಂಡ ಲಾರಿ ನಂ. ಟಾಟ 709 ಟಿ.ಎನ್.-69-ಕೆ-8159 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 43 (ಎ) (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 23.2.2005 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ, ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ಕರ್ನಾಟಕ ರಾಜ್ಯ ಅಬಕಾರಿ (ಮುಟ್ಟುಗೋಲು ಹಾಕಿಕೊಂಡ ವಸ್ತುಗಳ ವಿಲೇವಾರಿ) 1697ರ ನಿಯಮದಂತೆ ವಿಲೇವಾರಿ ಮಾಡಲಾಗುವುದೆಂದು ಆದೇಶಿಸಿದೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 405

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

| ಫಿರ್ಯಾದುದಾರರು | ಪ್ರತಿವಾದಿಗಳು |
|---|---|
| ಅಬಕಾರಿ ಉಪ ನಿರೀಕ್ಷಕರು, | ಸತೀಶ್ ಬಿನ್ ಚನ್ನಯ್ಯ, |
| ಉಪ ವಿಭಾಗ, ಮಂಡ್ಯ | ಲೀಲಾವತಿ ಬಡಾವಣೆ, 4ನೇ ಕ್ರಾಸ್, ಮದ್ದೂರು ಟೌನ್. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 30.10.2004 ರಂದು ರಾತ್ರಿ 9.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ, ಮಂಡ್ಯ - ರವರು ಮದ್ದೂರು ತಾಲ್ಲೂಕು, ಸೋಮನಹಳ್ಳಿಯಿಂದ ಕದಲೂರಿಗೆ ಹೋಗುವ ರೈಲ್ವೆ ಗೇಟ್ ಬಳಿ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಎಂವೈವಿ-8792 ರಲ್ಲಿ 35 ಲೀ.

ಸಾಮರ್ಥ್ಯವುಳ್ಳ ನಾಲ್ಕು ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ನಲ್ಲಿ ತಲಾ 35 ಲೀ. ನಂತೆ ಒಟ್ಟು 140 ಲೀ. ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯಸಾರವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 9/2004-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34, 38(ಎ), 43 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಜಯನಗರ, ಬೆಂಗಳೂರು - ಇವರಿಗೆ ದಿನಾಂಕ: 18.12.2004 ರಂದು ಪತ್ರ ಬರೆಯಲಾಗಿದ್ದು, ಈವರೆವಿಗೂ ಯಾವುದೇ ಮಾಹಿತಿಯು ಸ್ವೀಕೃತವಾಗಿರುವುದಿಲ್ಲ. ಪ್ರಕರಣದ ಆರೋಪಿಯಾದ ಬಿ. ಸತೀಶ್ ಬಿನ್ ಚನ್ನಯ್ಯ, ಲೀಲಾವತಿ ಬಡಾವಣೆ, 4ನೇ ತಿರುವು, ಮದ್ದೂರು ತಾಲ್ಲೂಕು, ಇವರಿಗೆ ವಾಹನ ಮತ್ತು ಮದ್ಯಸಾರವನ್ನು ವಾಹನವನ್ನು ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ದಿನಾಂಕ: 18.01.2005 ರಂದು ನೀಡಲಾಗಿದ್ದು ದಿನಾಂಕ: 05.01.2005 ರಂದು ಸದರಿಯವರಿಗೆ ಜಾರಿಯಾಗಿರುತ್ತದೆ. ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ರವರು ದಿನಾಂಕ: 20.12.2004 ರಂದು ವರದಿಯನ್ನು ಸಲ್ಲಿಸಿ ವಾಹನ ಮತ್ತು ಮದ್ಯಸಾರವನ್ನು ತಮ್ಮದೆಂದು ಹಕ್ಕು ಸಾಧನೆ ಮಾಡಲು ಮುಂದೆ ಬರದ ಕಾರಣ ವಾಹನ ಮತ್ತು ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಆದರಂತೆ ಸದರಿ ಮದ್ಯಸಾರವನ್ನು ದಿನಾಂಕ: 4.01.2005 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮೆ: ಮೈಷುಗರ್ ಕಂಪನಿ ಲಿ., ಮಂಡ್ಯ - ಇವರಿಗೆ ಸಾರಾಯಿ ತಯಾರಿಕೆಗೆ ಉಪಯೋಗಿಸಿ ಕೊಳ್ಳಲು ಹಂಚಿಕೆ ಮಾಡಲಾಗಿದೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯಸಾರವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 04.01.2005 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಈ ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 140 ಲೀ. ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ ಹಾಗೂ ಕಾರಣ ಕೇಳುವ ನೋಟೀಸಿಗೆ ಯಾವುದೇ ಪ್ರತಿಕ್ರಿಯೆಯನ್ನು ಈವರೆವಿಗೂ ವ್ಯಕ್ತಪಡಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಮೂರು (3) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಚಲಿತ ದಿನ ಪತ್ರಿಕೆಯಲ್ಲಾಗಲಿ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಾಗಲಿ ಪ್ರಕಟಣೆಯು ಇದುವರೆವಿಗೂ ಹೊರ ಬಿದ್ದಿರುವುದಿಲ್ಲ. ಆದ ಕಾರಣ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/70/2004-2005, ದಿನಾಂಕ: 2ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಎಂವೈವಿ-8792 ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 406 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ಪ್ರತಿವಾದಿಗಳು** |
|---|---|
| ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ, ಮಂಡ್ಯ ಜಿಲ್ಲೆ, ಮಂಡ್ಯ | ತಲೆ ತಪ್ಪಿಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 27.11.2004 ರಂದು ಬೆಳಿಗ್ಗೆ 10.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮಂಡ್ಯ ಉಪ ವಿಭಾಗ ರವರು ಮದ್ದೂರು ತಾಲ್ಲೂಕು ಮದ್ದೂರು-ಮಳವಳ್ಳಿ ರಸ್ತೆ ಕೆ.ಎಂ.ದೊಡ್ಡಿ ಹತ್ತಿರ ವಾಹನ ಟಿವಿಎಸ್ ಚಾಂಪ್ ಸಂಖ್ಯೆ: ಕೆಎ-11/ಇ-5935 ರಲ್ಲಿ 35 ಲೀ. ಸಾಮರ್ಥ್ಯವುಳ್ಳ ಒಂದು ಪ್ಲಾಸ್ಟಿಕ್ ಕ್ಯಾನ್‌ನಲ್ಲಿ 30 ಲೀ ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸೇಂದಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 12/2004-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ), 43 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ - ಇವರಿಗೆ ದಿನಾಂಕ: 18.12.2004 ರಂದು ಪತ್ರ ಬರೆಯಲಾಗಿದ್ದು, ಈವರೆವಿಗೂ ಯಾವುದೇ ಮಾಹಿತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುವುದಿಲ್ಲ. ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ರವರು ದಿನಾಂಕ: 16.12.2004 ರಂದು ವರದಿಯನ್ನು ಸಲ್ಲಿಸಿ, ವಾಹನ ಮತ್ತು ಸೇಂದಿಯು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಸೇಂದಿಯನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 04.01.2005 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಈ ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಸೇಂದಿಯು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ದಾಖಲಾತಿಗಳು ಇಲ್ಲದೆ ಮತ್ತು ರಾಜ್ಯದಲ್ಲಿ (2) ಜಿಲ್ಲೆಯನ್ನು ಹೊರತುಪಡಿಸಿ ಸೇಂದಿ ಮಾರಾಟ ನಿಷೇಧವಿದ್ದರೂ ಅಕ್ರಮವಾಗಿ 30 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಎರಡು (2) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಚಲಿತ ದಿನ ಪತ್ರಿಕೆಯಲ್ಲಾಗಲಿ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಾಗಲಿ ಪ್ರಕಟಣೆಯು ಇದುವರೆವಿಗೂ ಹೊರ ಬಿದ್ದಿರುವುದಿಲ್ಲ. ಆದರೂ ಸಹ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/87/2004-2005, ದಿನಾಂಕ: 2ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಟಿವಿಎಸ್ ಛಾಂಪ್ ಸಂಖ್ಯೆ: ಕೆಎ-11/ಇ-5935 ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 407 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ಪ್ರತಿವಾದಿಗಳು** |
|---|---|
| ಅಬಕಾರಿ ನಿರೀಕ್ಷಕರು, ಮದ್ದೂರು ವಲಯ. | ತಲೆ ತಪ್ಪಿಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 12.11.2004 ರಂದು ಬೆಳಗಿನ ಜಾವ 1.30 ಗಂಟೆಯಲ್ಲಿ ಅಬಕಾರಿ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ರವರು ಮದ್ದೂರು ಟೌನ್, ಮೈಸೂರು-ಬೆಂಗಳೂರು ಮುಖ್ಯ ರಸ್ತೆಯ, ಚನ್ನೇಗೌಡನ ದೊಡ್ಡಿ ಹೆಚ್.ಕೆ. ವೀರಣ್ಣಗೌಡ ಕಾಲೇಜು ಬಳಿ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-01/ಬಿ-1354 ರಲ್ಲಿ 13 ಪ್ಲಾಸ್ಟಿಕ್ ಗೋಣಿ ಚೀಲಗಳಲ್ಲಿ ತಲಾ 200 ಸ್ಯಾಚೆಟ್‌ಗಳಂತೆ 200 ಮಿಲಿಯ ಒಟ್ಟು 2600 ಸಾರಾಯಿ ಸ್ಯಾಚೆಟ್‌ಗಳು ಇವುಗಳ ಒಟ್ಟು ಮೊತ್ತ 520 ಲೀ ಕಳಭಟ್ಟಿ ಸಾರಾಯಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸಾರಾಯಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 3/2004-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 37, 38(ಎ), 43 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಕೇಂದ್ರ), ಬೆಂಗಳೂರು ಇವರಿಗೆ ದಿನಾಂಕ: 18.12.2004 ರಂದು ಪತ್ರ ಬರೆಯಲಾಗಿದ್ದು, ಈವರೆವಿಗೂ ಯಾವುದೇ ಮಾಹಿತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುವುದಿಲ್ಲ.

ವಶಪಡಿಸಿಕೊಂಡ ಸಾರಾಯಿಯ ಪೈಕಿ ಮಾದರಿ ತೆಗೆದ ಸಾರಾಯಿಯನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ವರದಿ ಪಡೆಯಲಾಗಿ ಸಾರಾಯಿಯು ಮಾನವ ಸೇವನೆಗೆ ಯೋಗ್ಯವಾಗಿರುವುದಿಲ್ಲವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ರವರು 16.12.2004 ರಂದು ರಾಸಾಯನಿಕ ತಜ್ಞರ ವರದಿಯೊಂದಿಗೆ ವರದಿಯನ್ನು ಸಲ್ಲಿಸಿ ವಾಹನ ಮತ್ತು ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿಯು ಮಾನವ ಸೇವನೆಗೆ ಯೋಗ್ಯವಲ್ಲದ ಕಾರಣ ನಾಶಪಡಿಸಲು ಕೋರಿರುತ್ತಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಸಾರಾಯಿಯನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 04.01.2005 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಈ ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ತಿಳಿಸಲಾಗಿತ್ತು. ಅಬಕಾರಿ ನಿರೀಕ್ಷಕರು, ಮದ್ದೂರು ವಲಯ, ಮತ್ತು ರಾಸಾಯನಿಕ ತಜ್ಞರ ವರದಿಯಂತೆ 520 ಲೀ ಸಾರಾಯಿಯನ್ನು ದಿನಾಂಕ: 4.1.2005 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಲಾಗಿದೆ.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 520 ಲೀ. ಸಾರಾಯಿಯನ್ನ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಮೂರು (3) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಚಲಿತ ದಿನ ಪತ್ರಿಕೆಯಲ್ಲಾಗಲಿ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಾಗಲಿ ಪ್ರಕಟಣೆಯು ಇದುವರೆವಿಗೂ ಹೊರ ಬಿದ್ದಿರುವುದಿಲ್ಲ. ಆದ ಕಾರಣ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/74/2004-2005, ದಿನಾಂಕ: 2ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-01/ಬಿ-1354ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 408 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

## ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ

| ಫಿರ್ಯಾದುದಾರರು | ಪ್ರತಿವಾದಿಗಳು |
|---|---|
| ಅಬಕಾರಿ ಉಪ ನಿರೀಕ್ಷಕರು, | ಬಿ. ಚನ್ನಯ್ಯ ಬಿನ್ ಬೋಜೆಗೌಡ, ಪಡಿಗೌಡನ ಕೊಪ್ಪಲು (ಟಿ. ಚನ್ನಾಪುರ ಪಕ್ಕ) |
| ನಾಗಮಂಗಲ ಉಪ ವಲಯ. | ಹೊಣಕೆರೆ ಹೋಬಳಿ, ನಾಗಮಂಗಲ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 4.09.2004 ರಂದು ಬೆಳಿಗ್ಗೆ 9.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ನಾಗಮಂಗಲ ವಲಯ, ನಾಗಮಂಗಲ ರವರು ನಾಗಮಂಗಲ ತಾಲ್ಲೂಕು ಗಂಗವಾಡಿ ಬಸ್‌ನಿಲ್ದಾಣದ ಹತ್ತಿರ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-03/ಕ್ಯೂ-5800 ರಲ್ಲಿ 8.640 ಲೀ. ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 3/2004-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34, 38(ಎ), 43 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ವಶಪಡಿಸಿಕೊಂಡ ಮದ್ಯದ ಪೈಕಿ ಮಾದರಿ ತೆಗೆದ ಮದ್ಯವನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ವರದಿ ಪಡೆಯಲಾಗಿ ಮದ್ಯವು ನಕಲಿ ಎಂದು ಧೃಢಪಟ್ಟಿರುತ್ತದೆ. ಅಬಕಾರಿ ನಿರೀಕ್ಷಕರು, ನಾಗಮಂಗಲ ವಲಯ ರವರು 04.11.2004 ರಂದು ರಾಸಾಯನಿಕ ತಜ್ಞರ ವರದಿಯೊಂದಿಗೆ ವರದಿಯನ್ನು ಸಲ್ಲಿಸಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವು ಮಾನವ ಸೇವನೆಗೆ ಯೋಗ್ಯವಲ್ಲದ ಕಾರಣ ನಾಶಪಡಿಸಲು ಕೋರಿರುತ್ತಾರೆ.

ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಇಂದಿರಾ ನಗರ, ಮಂಡ್ಯ - ಇವರಿಗೆ ದಿನಾಂಕ: 17.12.2004 ರಂದು ಪತ್ರ ಬರೆಯಲಾಗಿದ್ದು, ಈವರೆವಿಗೂ ಯಾವುದೇ ಮಾಹಿತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುವುದಿಲ್ಲ. ಮದ್ಯವು ಯೋಗ್ಯವಾಗಿಲ್ಲದ ಕಾರಣ ನಾಶಪಡಿಸಲು ದಿನಾಂಕ: 18.12.2004 ರಂದು ಆದೇಶ ನೀಡಲಾಗಿದೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯಸಾರವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 04.01.2005 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಈ ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 8.640 ಲೀ. ಮದ್ಯವನ್ನ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ ಹಾಗೂ ಕಾರಣ ಕೇಳುವ ನೋಟೀಸಿಗೆ ಯಾವುದೇ ಪ್ರತಿಕ್ರಿಯೆಯನ್ನು ಈವರೆವಿಗೂ ವ್ಯಕ್ತಪಡಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ನಾಲ್ಕು (4) ತಿಂಗಳಿಗೂ ಹೆಚ್ಚು ಕಾಲ ಪ್ರತಿಕ್ರಿಯೆಯನ್ನು ಈವರೆವಿಗೂ ವ್ಯಕ್ತಪಡಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ನಾಲ್ಕು (4) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಚಲಿತ ದಿನ ಪತ್ರಿಕೆಯಲ್ಲಾಗಲಿ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಾಗಲಿ ಪ್ರಕಟಣೆಯು ಇದುವರೆವಿಗೂ ಹೊರ ಬಿದ್ದಿರುವುದಿಲ್ಲ. ಆದ ಕಾರಣ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/32/2004-05, ದಿನಾಂಕ: 2ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-03/ಕ್ಯೂ-5800 ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 409 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

## ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ

| ಫಿರ್ಯಾದುದಾರರು | ಪ್ರತಿವಾದಿಗಳು |
|---|---|
| ಅಬಕಾರಿ ಉಪ ನಿರೀಕ್ಷಕರು, ಮದ್ದೂರು ಉಪ ವಲಯ. | ಆರೋಪಿ ಓಡಿ ಹೋಗಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 16.12.2004 ರಂದು ಬೆಳಿಗ್ಗೆ 6.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮದ್ದೂರು ಉಪ ವಲಯ ರವರು ಮದ್ದೂರು ತಾಲ್ಲೂಕು, ಆತಗೂರು ಬಸ್ ನಿಲ್ದಾಣದಲ್ಲಿ ವಾಹನ ಟಿವಿಎಸ್-ಛಾಂಪ್ ಸಂಖ್ಯೆ: ಕೆಎ-04/ಯು-1351 ರಲ್ಲಿ 3 ಬಿಳಿಯ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಒಟ್ಟು 40 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸೇಂದಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 11/04-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ), 43 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಯಶವಂತ್‌ಪುರ, ಬೆಂಗಳೂರು ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 28.12.2004 ರಂದು ಪತ್ರ ಬರೆಯಲಾಗಿದ್ದು, ಅಲ್ಲಿಂದಲೂ ಸಹ ಯಾವುದೇ ಮಾಹಿತಿಯನ್ನು ಈವರೆವಿಗೂ ನೀಡಿರುವುದಿಲ್ಲ. ವಾಹನ ಮಾಲೀಕರು ಎಸ್. ಅನಿತಾ ಬಿನ್ ಎನ್. ಶಂಕರ್ ರಾವ್, ನಂ.46, ರಾಮಗೀತಾ ಮಂದಿರ, 1ನೇ ಮೈನ್, 1ನೇ ಕ್ರಾಸ್, ಜೆ.ಸಿ. ನಗರ, ಕೆ.ಆರ್. ಪಾಳ್ಯ, ಬೆಂಗಳೂರು ಎಂದು ಕಂಡು ಬಂದ ಕಾರಣ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ

ಕೇಳುವ ನೋಟೀಸು ನೀಡಲಾಗಿದ್ದು ಸದರಿ ನೋಟೀಸಿಗೆ ಪ್ರತಿಕ್ರಿಯಿಸಿ ವಾಹನವನ್ನು ಕೃಷ್ಣ ಬಿನ್ ದಾಸಯ್ಯ, ಅವ್ವೇರಳ್ಳಿ, ಹೊನ್ನಾಯನಾಕನಹಳ್ಳಿ ಅಂಚೆ, ಚನ್ನಪಟ್ಟಣ ತಾಲ್ಲೂಕು, ಮಳ್ಳೂರು ಹೋಬಳಿ, ಬೆಂಗಳೂರು ಜಿಲ್ಲೆ - ಇವರಿಗೆ ಮಾರಾಟ ಮಾಡಿರುವುದಾಗಿ ಈ ಪ್ರಾಧಿಕಾರಕ್ಕೆ ತಿಳಿಸಿರುತ್ತಾರೆ.

ವಶಪಡಿಸಿಕೊಂಡ ಸೇಂದಿಯ ಪೈಕಿ ಮಾದರಿ ತೆಗೆದ ಸೇಂದಿಯನ್ನು ರಾಸಾಯನಿಕ ಪರೀಕ್ಷೆಗೆ ಕಳುಹಿಸಿ ವರದಿ ಪಡೆಯಲಾಗಿ ಮದ್ಯಸಾರದ ಅಂಶ ಇರುವುದಾಗಿಯೂ ಮತ್ತು ಮಾನವ ಸೇವನೆಗೆ ಯೋಗ್ಯವೆಂದು ದೃಢಪಟ್ಟಿರುತ್ತದೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಸೇಂದಿಯನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 04.01.2005 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಈ ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಸೇಂದಿಯು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ದಾಖಲಾತಿಗಳು ಇಲ್ಲದೆ ಹಾಗೂ ಜಿಲ್ಲೆಯಲ್ಲಿ ಸೇಂದಿ ಮಾರಾಟ ನಿಷೇದವಿದ್ದರೂ ಸಹ ಅಕ್ರಮವಾಗಿ 40 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು (1 1/2) ತಿಂಗಳು ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯು ಇದುವರೆವಿಗೂ ಹೊರ ಬಿದ್ದಿರುವುದಿಲ್ಲ. ಆದರೂ ಸಹ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/101/2004-05, ದಿನಾಂಕ: 2ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಟಿವಿಎಸ್ ಛಾಂಪ್ ಸಂಖ್ಯೆ: ಕೆಎ-04/ಯು-1351 ಮತ್ತು 40 ಲೀ. ಸೇಂದಿಯನ್ನು (ಸ್ಯಾಂಪಲ್ ಬಾಟಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಹೀಗೆ ಮುಟ್ಟುಗೋಲು ಹಾಕಿಕೊಂಡ ಸೇಂದಿಯನ್ನು ನಾಶಪಡಿಸಲು ಆದೇಶಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 410 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ಪ್ರತಿವಾದಿಗಳು** |
|---|---|
| ಅಬಕಾರಿ ಉಪ ನಿರೀಕ್ಷಕರು, | ರಾಜು ಬಿನ್ ಲೇ: ರಾಮು, |
| ನಂ.4, ಗುಪ್ತ ವಾರ್ತಾವಿಭಾಗ, ಮೈಸೂರು ವಿಭಾಗ, ಮೈಸೂರು. | ದೊಡ್ಡ ಬೀದಿ, ತೈಲೂರು, ಮದ್ದೂರು ತಾ: ಮದ್ದೂರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 15.12.2004 ರಂದು ಬೆಳಿಗ್ಗೆ 10.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ನಂ.4, ಗುಪ್ತವಾರ್ತಾ ವಿಭಾಗ, ಮೈಸೂರು ವಿಭಾಗ, ಮೈಸೂರು - ರವರು ಮದ್ದೂರು ತಾಲ್ಲೂಕು, ಮಳವಳ್ಳಿ - ಕೆ.ಎಂ.ದೊಡ್ಡಿ ರಸ್ತೆಯ ಚಿಕ್ಕ ಅರಸಿನಕೆರೆ ಗೇಟ್ ಹತ್ತಿರ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-02/ಆರ್-8279 ರಲ್ಲಿ 35 ಲೀ. ಸಾಮರ್ಥ್ಯವುಳ್ಳ ಒಂದು ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ನಲ್ಲಿ 35 ಲೀ ಮತ್ತೊಂದು ಕ್ಯಾನ್‌ನಲ್ಲಿ 20 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸೇಂದಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 04/2004-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ), 43 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ರಾಜಾಜಿನಗರ, ಬೆಂಗಳೂರು ಇವರಿಗೆ ದಿನಾಂಕ: 28.12.2004 ರಂದು ಪತ್ರ ಬರೆಯಲಾಗಿದ್ದು, ಈವರೆವಿಗೂ ಯಾವುದೇ ಮಾಹಿತಿಯನ್ನು ನೀಡಿರುವುದಿಲ್ಲ. ಈ ಪ್ರಾಧಿಕಾರದಿಂದ ವಾಹನವನ್ನು ಯಾರಿಂದ ವಶಪಡಿಸಿಕೊಳ್ಳಲಾಗಿದೆಯೋ ರಾಜು ಬಿನ್ ಲೇ: ರಾಮು ಇವರಿಗೆ ಕಲಂ 43(ಬಿ)ರ ಅಡಿಯಲ್ಲಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ಖುದ್ದಾಗಿ ದಿನಾಂಕ: 6.01.2005 ರಂದು ಮತ್ತು 5.01.2005 ರಂದು ಕ್ರಮವಾಗಿ ಜಾರಿ ಮಾಡಲಾಗಿರುತ್ತದೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಸೇಂದಿಯನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 04.01.2005 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಈ ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ವಾಹನದಲ್ಲಿ ಯಾವುದೇ ದಾಖಲಾತಿಗಳು ಇಲ್ಲದೆ ಹಾಗೂ ಜಿಲ್ಲೆಯಲ್ಲಿ ಸೇಂದಿ ಮಾರಾಟ ನಿಷೇಧವಿದ್ದರೂ ಸಹ ಅಕ್ರಮವಾಗಿ 50 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ವಾಹನವನ್ನು ಯಾರಿಂದ ವಶಪಡಿಸಿಕೊಳ್ಳಲಾಯಿತು ಅವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿದ್ದು ಈವರೆವಿಗೂ ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಒಂದು (1) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ

ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಚಲಿತ ದಿನ ಪತ್ರಿಕೆಯಲ್ಲಾಗಲಿ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಾಗಲಿ ಪ್ರಕಟಣೆಯು ಇದುವರೆವಿಗೂ ಹೊರ ಬಿದ್ದಿರುವುದಿಲ್ಲ. ಆದ ಕಾರಣ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/98/2004-05, ದಿನಾಂಕ: 2ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಚೇತಕ್ ಸಂಖ್ಯೆ: ಕೆಎ-02/ಆರ್-8279 ಮತ್ತು 50 ಲೀ. ಸೇಂದಿಯನ್ನು (ಸ್ಯಾಂಪಲ್ ಬಾಟಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಹೀಗೆ ಮುಟ್ಟುಗೋಲು ಹಾಕಿಕೊಂಡ ಸೇಂದಿಯನ್ನು ನಾಶಪಡಿಸಲು ಆದೇಶಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 411 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ಪ್ರತಿವಾದಿಗಳು** |
|---|---|
| ಅಬಕಾರಿ ಉಪ ನಿರೀಕ್ಷಕರು, | ಕೃಷ್ಣಪ್ಪ ಬಿನ್ ಲೇ: ನರಸಪ್ಪ, |
| ಮದ್ದೂರು ಉಪ ವಲಯ, ಮದ್ದೂರು. | ಕೆ.ಎಂ. ದೊಡ್ಡಿ, ಭಾರತಿ ಕಾಲೇಜ್ ಹಿಂಭಾಗ, ಮದ್ದೂರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 14.12.2004 ರಂದು ಬೆಳಿಗ್ಗೆ 8.30 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮದ್ದೂರು ಉಪ ವಲಯ ರವರು ಮದ್ದೂರು ತಾಲ್ಲೂಕು ಮಾರುತಿ ಚಿತ್ರಮಂದಿರ, ದೇವರಹಳ್ಳಿ ಗ್ರಾಮಕ್ಕೆ ಹೋಗುವ ತಿರುವು ರಸ್ತೆಯಲ್ಲಿ ವಾಹನ ಟಿವಿಎಸ್-50 ಸಂಖ್ಯೆ: ಸಿಎನ್‌ಎನ್-1917 ರಲ್ಲಿ 35 ಲೀ. ಸಾಮರ್ಥ್ಯವುಳ್ಳ ಒಂದು ಪ್ಲಾಸ್ಟಿಕ್ ಕ್ಯಾನ್‌ನಲ್ಲಿ 35 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸೇಂದಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 10/2004-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ), 43 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ - ಇವರಿಗೆ ದಿನಾಂಕ: 28.12.2004 ರಂದು ಪತ್ರ ಬರೆಯಲಾಗಿದ್ದು, ಈವರೆವಿಗೂ ಯಾವುದೇ ಮಾಹಿತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುವುದಿಲ್ಲ. ಈ ಪ್ರಕರಣದ ಆರೋಪಿಯಾದ ಕೃಷ್ಣಪ್ಪ ಬಿನ್ ಲೇ: ನರಸಪ್ಪ - ಇವರಿಗೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೀಡಲಾಗಿದ್ದು ದಿನಾಂಕ: 01.01.2005 ರಂದು ಆರೋಪಿಗೆ ಜಾರಿ ಮಾಡಲಾಗಿದ್ದು, ಸದರಿ ನೋಟೀಸಿಗೆ ಪ್ರತಿಕ್ರಿಯಿಸಿ 'ನಾನು ನೀರಾ ಮಾರಾಟ ಮಾಡುತ್ತಿದ್ದೇನೆ ವಿನಃ ಸೇಂದಿಯನ್ನಲ್ಲ' ಎಂದು ತಿಳಿಸುತ್ತಾ ನೀರಾ ಮಾರಾಟದಿಂದಲೇ ಜೀವನ ನಡೆಸುತ್ತಿರುವ ನಮಗೆ ವಾಹನ ಮತ್ತು ಸೇಂದಿಯನ್ನು ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಸೇಂದಿಯನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 04.01.2005 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಈ ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 35 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಾನು ನೀರಾ ಮಾರಾಟ ಮಾಡುತ್ತಿದ್ದೇನೆ ವಿನಃ ಸೇಂದಿಯನ್ನಲ್ಲವೆಂದು ತಿಳಿಸಿರುತ್ತಾರೆ. ಜಿಲ್ಲೆಯಲ್ಲಿ ನೀರಾ/ಸೇಂದಿಯು ನಿಷೇಧವಿದ್ದು ಇಂತಹ ಪಾನೀಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದನ್ನು ಪ್ರತಿವಾದಿಯು ಲಿಖಿತ ಮೂಲಕ ತಿಳಿಸಿರುತ್ತಾರೆ. ಅಲ್ಲದೇ ವಾಹನವನ್ನು ಬಿಡುಗಡೆ ಮಾಡಲು ಕೋರಿದ್ದು. ವಾಹನ ಮಾಲೀಕರು ಎಂಬುದಕ್ಕೆ ಯಾವುದೇ ದಾಖಲಾತಿಗಳನ್ನು ಹಾಜರು ಪಡಿಸಿರುವುದಿಲ್ಲ. ವಾಹನ ಮಾಲೀಕರಿಗೆ ಮಾಲೀಕತ್ವವನ್ನು ನಿರೂಪಿಸಲು ಪತ್ರಿಕಾ ಪ್ರಕಟಣೆಯನ್ನು ನೀಡಲಾಗಿದ್ದು, ಪ್ರಚಲಿತ ದಿನ ಪತ್ರಿಕೆಯಲ್ಲಾಗಲಿ / ರಾಜ್ಯ ಪತ್ರದಲ್ಲಾಗಲಿ ಪ್ರಕಟಣೆಯು ಇದುವರೆವಿಗೂ ಹೊರ ಬಿದ್ದಿರುವುದಿಲ್ಲ. ಪ್ರಕರಣ ದಾಖಲಾಗಿ ಸುಮಾರು ಒಂದು (1) ತಿಂಗಳಿಗೂ ಹೆಚ್ಚು ಕಾಲ ಗತಿಸಿದ್ದು ವಾಹನವನ್ನು ಹೀಗೆಯೇ ಬಿಟ್ಟಲ್ಲಿ ಮಳೆ, ಗಾಳಿ ಮತ್ತು ಬಿಸಿಲಿನ ವೈಪರೀತ್ಯಕ್ಕೆ ಬಿಡಿಭಾಗಗಳು ಹಾಳಾಗುವ ಸಾಧ್ಯತೆ ಹೆಚ್ಚಿರುತ್ತದೆ. ಈ ಎಲ್ಲಾ ಕಾರಣಗಳಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/97/2004-05, ದಿನಾಂಕ: 2ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಟಿವಿಎಸ್-50 ಸಂಖ್ಯೆ ಸಿಎನ್‌ಎನ್-1917 ಮತ್ತು 35 ಲೀ. ಸೇಂದಿಯನ್ನು (ಸ್ಯಾಂಪಲ್ ಬಾಟಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಹೀಗೆ ಮುಟ್ಟುಗೋಲು ಹಾಕಿಕೊಂಡ ಸೇಂದಿಯನ್ನು ನಾಶಪಡಿಸಲು ಆದೇಶಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 412 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ಪ್ರತಿವಾದಿಗಳು** |
|---|---|
| ಅಬಕಾರಿ ನಿರೀಕ್ಷಕರು, | ರಾಜಕ್‌ಸಾಬ್ ಬಿನ್ ಬಾಷಾ, |
| ಮದ್ದೂರು ಉಪ ವಲಯ | ನಂ.867, 7ನೇ ಕ್ರಾಸ್, ಟ್ಯಾನಿ ರಸ್ತೆ, ಮಂಡಿ, ಶಿವಾಜಿನಗರ, ಬೆಂಗಳೂರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 2.11.2004 ರಂದು ಸಾಯಂಕಾಲ 5.30 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮದ್ದೂರು, ಮದ್ದೂರು ಉಪ ವಲಯ ರವರು ಮದ್ದೂರು ತಾಲ್ಲೂಕು ಮೈಸೂರು-ಬೆಂಗಳೂರು ರಸ್ತೆ, ನಿಡಘಟ್ಟ ಗ್ರಾಮದಿಂದ ಸ್ವಲ್ಪ ಮುಂದೆ ಇರುವ ಮುಸ್ಲಿಂ ಮಸೀದಿ (ದರ್ಗಾ) ಮುಂಭಾಗದ ರಸ್ತೆಯಲ್ಲಿ ವಾಹನ ಟಾಟಾ ಸುಮೋ ಸಂಖ್ಯೆ: ಕೆಎ-01/ಎನ್-8727 ರಲ್ಲಿ ಅಕ್ರಮವಾಗಿ 7 ಗೋಣಿಚೀಲದಲ್ಲಿ ತಲಾ 250 ರಂತೆ 200 ಮಿಲಿಯ ಸಾರಾಯಿ ಸ್ಯಾಚೆಟ್‌ಗಳು ಮತ್ತು ಮತ್ತೊಂದು ಗೋಣಿಚೀಲದಲ್ಲಿ 200 ಮಿಲಿಯಂತೆ 200 ಸಾರಾಯಿ ಸ್ಯಾಚೆಟ್‌ಗಳು ಒಟ್ಟು 390 ಲೀ. ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸಾರಾಯಿಯನ್ನು ಜಫ್ತು ಮಾಡಿ ಪ್ರಕರಣ ಸಂಖ್ಯೆ: 8/2004-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34, 37, 38(ಎ), 43 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಕೇಂದ್ರ), ಬೆಂಗಳೂರು - ಇವರಿಗೆ ದಿನಾಂಕ: 18.12.2004 ರಂದು ಪತ್ರ ಬರೆಯಲಾಗಿದ್ದು, ಈವರೆವಿಗೂ ಯಾವುದೇ ಮಾಹಿತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುವುದಿಲ್ಲ. ಪ್ರಕರಣದ ಆರೋಪಿಯಾದ ರಾಜಾಕ್ ಸಾಬ್ ಬಿನ್ ಬಾಷಾ, 867, 7ನೇ ಕ್ರಾಸ್, ಟ್ಯಾನಿ ರಸ್ತೆ, ಮಂಡಿ, ಶಿವಾಜಿನಗರ, ಬೆಂಗಳೂರು - ಇವರಿಗೆ ವಾಹನ ಮತ್ತು ಸಾರಾಯಿಯನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 (ಬಿ)ರ ಅಡಿಯಲ್ಲಿ ಈ ಪ್ರಾಧಿಕಾರದಿಂದ ದಿನಾಂಕ: 18.12.2004 ರಂದು ಕಾರಣ ಕೇಳುವ ನೋಟೀಸನ್ನು ನೀಡಲಾಗಿದೆ.

ವಶಪಡಿಸಿಕೊಂಡ ಸಾರಾಯಿಯ ಪೈಕಿ ಮಾದರಿ ತೆಗೆದ ಸಾರಾಯಿಯನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ವರದಿ ಪಡೆಯಲಾಗಿ ಸಾರಾಯಿಯು ಮಾನವ ಸೇವನೆಗೆ ಯೋಗ್ಯವಾಗಿರುವುದಿಲ್ಲವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ರವರು ದಿನಾಂಕ: 16.12.2004 ರಂದು ರಾಸಾಯನಿಕ ತಜ್ಞರ ವರದಿಯೊಂದಿಗೆ ವರದಿಯನ್ನು ಸಲ್ಲಿಸಿ ವಾಹನ ಮತ್ತು ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿಯು ಮಾನವ ಸೇವನೆಗೆ ಯೋಗ್ಯವಲ್ಲದ ಕಾರಣ ನಾಶಪಡಿಸಲು ಕೋರಿರುತ್ತಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಸಾರಾಯಿಯನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 04.01.2005 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಈ ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ತಿಳಿಸಲಾಗಿತ್ತು. ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ಮತ್ತು ರಾಸಾಯನಿಕ ತಜ್ಞರ ವರದಿಯಂತೆ 390 ಲೀ. ಸಾರಾಯಿಯನ್ನು ದಿನಾಂಕ: 4.01.2005 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಲಾಗಿದೆ.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 390 ಲೀ. ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಮೂರು (3) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಚಲಿತ ದಿನ ಪತ್ರಿಕೆಯಲ್ಲಾಗಲಿ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಾಗಲಿ ಪ್ರಕಟಣೆಯು ಇದುವರೆವಿಗೂ ಹೊರ ಬಿದ್ದಿರುವುದಿಲ್ಲ. ಆದ ಕಾರಣ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/72/2004-05, ದಿನಾಂಕ: 2ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಟಾಟಾ ಸುಮೋ ಸಂಖ್ಯೆ: ಕೆಎ-01/ಎನ್-8727ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 413 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯದ ನಡವಳಿ**

**ಸಂಖ್ಯೆ: ಡಿಟಿಸಿಆರ್/124/1994-95, ದಿನಾಂಕ: 1ನೇ ಫೆಬ್ರವರಿ 2005**

| **ಫಿರ್ಯಾದುದಾರರು** | **ಪ್ರತಿವಾದಿಗಳು** |
|---|---|
| ಅಬಕಾರಿ ನಿರೀಕ್ಷಕರು, | ಎಸ್. ರಾಜ್‌ರಾಮ್ ಬಿನ್ ಪಿ. ಸುಬ್ರಮಣಿ, |
| ಮದ್ದೂರು ಉಪ ವಲಯ | ನಂ.75/1, 4ನೇ ತಿರುವು, ಎಸ್.ಬಿ.ಎಂ. ಕಾಲೋನಿ, ಮತ್ತೀಕೆರೆ, ಬೆಂಗಳೂರು. |

**ನೋಟೀಸು**

ದಿನಾಂಕ: 19.10.1995 ರಂದು ಸುಮಾರು 6.00 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ರವರು ಮದ್ದೂರು ಮಳವಳ್ಳಿ ಮುಖ್ಯ ರಸ್ತೆ, ಹೆಬ್ಬಾಳ ಸೇತುವೆ ಬಳಿ ವಾಹನ ಲಾರಿ ಸಂಖ್ಯೆ: ಕೆಎ-04/6667 ರಲ್ಲಿ ಅಕ್ರಮವಾಗಿ 2,255.040 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ವಶಪಡಿಸಿಕೊಂಡು ಪ್ರ.ಮಾ.ವ. ಸಂಖ್ಯೆ:2/95-96 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34, 38(ಎ) ರೀತ್ಯಾ ಕ್ರಮ ಜರುಗಿಸಿರುತ್ತಾರೆ. ಈ ಸಂಬಂಧ ಎಸ್. ರಾಮರಾಜ್ ಆದ ನೀವು ವಶಪಡಿಸಿಕೊಂಡ ವಾಹನಕ್ಕೆ ಸಂಬಂಧಿಸಿದಂತೆ ವಕೀಲರ ಮುಖೇನ ದಿನಾಂಕ: 21.11.1995 ರಂದು ಮನವಿಯನ್ನು ಸಲ್ಲಿಸಿ ತಾತ್ಕಾಲಿಕ ಸುಪರ್ದಿಗೆ ಬಿಡುಗಡೆ ಮಾಡಿ ಕೊಡಬೇಕೆಂದು ಕೋರಿರುತ್ತೀರಿ. ಅದರಂತೆ ಈ ಪ್ರಾಧಿಕಾರವು ನಿಮ್ಮ ಮನವಿಯನ್ನು ಪುರಸ್ಕರಿಸಿ ತನ್ನ ಆದೇಶದ ದಿನಾಂಕ: 8.2.96 ರಂತೆ ಕೆಲವು ಷರತ್ತುಗಳನ್ನು ವಿಧಿಸಿ ವಿಚಾರಣೆಯನ್ನು ಕಾಯ್ದಿರಿಸಿ ತಾತ್ಕಾಲಿಕವಾಗಿ ತಮ್ಮ ವಶಕ್ಕೆ ಬಿಡುಗಡೆ ಮಾಡಲಾಗಿದೆ. ಈ ಪ್ರಕರಣವು ವಿಚಾರಣಾ ಹಂತದಲ್ಲಿದ್ದು, ಹಲವಾರು ಬಾರಿ ನೋಟೀಸ್ ನೀಡಿದ್ದರೂ ಸಹ ವಿಳಾಸದಲ್ಲಿ ಇರುವುದಿಲ್ಲವೆಂದು ಷರಾದೊಂದಿಗೆ ನೋಟೀಸುಗಳು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುತ್ತದೆ. ವಿಚಾರಣೆಯನ್ನು ನಡೆಸಲು

ವಾಹನ ಮತ್ತು ನಿಮ್ಮ ಹೇಳಿಕೆಯು ಅವಶ್ಯಕತೆಯಿರುವುದರಿಂದ ದಿನಾಂಕ: 3.03.2005 ರಂದು ಬೆಳಿಗ್ಗೆ 11.00 ಗಂಟೆಗೆ ಈ ಪ್ರಾಧಿಕಾರದ ಮುಂದೆ ವಾಹನ ಮತ್ತು ವಕೀಲರೊಡನೆ ಹಾಜರಾಗಲು ಸೂಚಿಸಲಾಗಿದೆ.

ಪಿ.ಆರ್. 414 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ಪ್ರತಿವಾದಿಗಳು** |
|---|---|
| ಅಬಕಾರಿ ನಿರೀಕ್ಷಕರು, ಮದ್ದೂರು ಉಪ ವಲಯ | ತಲೆ ತಪ್ಪಿಸಿಕೊಂಡಿರುತ್ತಾರೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 27.10.2004 ರಂದು ಬೆಳಗಿನ ಜಾವ 4.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು-ರವರು ಮದ್ದೂರು ತಾಲ್ಲೂಕು ಮೈಸೂರು-ಬೆಂಗಳೂರು ರಸ್ತೆ, ರುದ್ರಾಕ್ಷಿಪುರ ಬಸ್‌ನಿಲ್ದಾಣದ ಬಳಿ ವಾಹನ ಮಾರುತಿ 800 ಕಾರ್ ಸಂಖ್ಯೆ: ಕೆಎ-03/ಎಂಸಿ-194 ರಲ್ಲಿ 500 ಲೀ. ತೆರಿಗೆ ರಹಿತ ಸಾರಾಯಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸಾರಾಯಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 6/2004-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 36, 38(ಎ) ಮತ್ತು 43 ರಂತೆ ಕ್ರಮ ಜರುಗಿಸಿರುತ್ತಾರೆ.

ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಇಂದಿರಾ ನಗರ, ಬೆಂಗಳೂರು - ಇವರಿಗೆ ದಿನಾಂಕ: 17.12.2004 ರಂದು ಪತ್ರ ಬರೆಯಲಾಗಿದ್ದು, ಈವರೆವಿಗೂ ಯಾವುದೇ ಮಾಹಿತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುವುದಿಲ್ಲ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಸಾರಾಯಿಯನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 04.01.2005 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಈ ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ತಿಳಿಸಲಾಗಿತ್ತು.

ವಶಪಡಿಸಿಕೊಂಡ ಸಾರಾಯಿಯ ಪೈಕಿ ಮಾದರಿ ತೆಗೆದ ಸಾರಾಯಿಯನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ವರದಿ ಪಡೆಯಲಾಗಿ ಸಾರಾಯಿಯು ಮಾನವ ಸೇವನೆಗೆ ಯೋಗ್ಯವಾಗಿರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ರವರು ದಿನಾಂಕ: 18.01.2005 ರಂದು ರಾಸಾಯನಿಕ ತಜ್ಞರ ವರದಿಯೊಂದಿಗೆ ವರದಿಯನ್ನು ಸಲ್ಲಿಸಿ ವಾಹನ ಮತ್ತು ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿಯು ಮಾನವ ಸೇವನೆಗೆ ಯೋಗ್ಯವಲ್ಲದ ಕಾರಣ ನಾಶಪಡಿಸಲು ಕೋರಿರುತ್ತಾರೆ.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 500 ಲೀ. ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ನಾಲ್ಕು (4) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಚಲಿತ ದಿನ ಪತ್ರಿಕೆಯಲ್ಲಾಗಲಿ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಾಗಲಿ ಪ್ರಕಟಣೆಯು ಇದುವರೆವಿಗೂ ಹೊರ ಬಿದ್ದಿರುವುದಿಲ್ಲ. ಆದ ಕಾರಣ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/66/2004-05, ದಿನಾಂಕ: 31ನೇ ಜನವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರ್ ಸಂಖ್ಯೆ: ಕೆಎ-03/ಎಂಸಿ-194ನ್ನು ಮತ್ತು 500 ಲೀ. ಸಾರಾಯಿಯನ್ನು (ಮಾದರಿ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಹೀಗೆ ಮುಟ್ಟುಗೋಲು ಹಾಕಿಕೊಂಡ ಸಾರಾಯಿಯು ಮಾನವ ಸೇವನೆಗೆ ಯೋಗ್ಯವಲ್ಲದ ಕಾರಣ ನಾಶಪಡಿಸಲು ಆದೇಶಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 415 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ಪ್ರತಿವಾದಿಗಳು** |
|---|---|
| ಅಬಕಾರಿ ನಿರೀಕ್ಷಕರು, ಉಪವಿಭಾಗ ಮಂಡ್ಯ. | ತಲೆ ತಪ್ಪಿಸಿಕೊಂಡಿರುತ್ತಾರೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 27.11.2004 ರಂದು ಮಧ್ಯಾಹ್ನ 3.00 ಗಂಟೆಯಲ್ಲಿ ಅಬಕಾರಿ ನಿರೀಕ್ಷಕರು, ಉಪ ವಿಭಾಗ, ಮಂಡ್ಯ - ರವರು ಮದ್ದೂರು ತಾಲ್ಲೂಕು, ಕೆ.ಎಂ. ದೊಡ್ಡಿ ಹಲಗೂರು ರಸ್ತೆಯ ಹಾಲಭುಜನಹಳ್ಳಿ ಕ್ರಾಸ್ ಬಳಿ ವಾಹನ ಟಿವಿಎಸ್-50 ಸಂಖ್ಯೆ: ಕೆಎ-11/ಇ-6255 ರಲ್ಲಿ 30 ಲೀ. ಸಾಮರ್ಥ್ಯವುಳ್ಳ ಒಂದು ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ನಲ್ಲಿ 25 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸೇಂದಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 12/2004-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ), 43 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರಿಗೆ ದಿನಾಂಕ: 18.12.2004 ರಂದು ಪತ್ರ ಬರೆಯಲಾಗಿದ್ದು, ಈವರೆವಿಗೂ ಯಾವುದೇ ಮಾಹಿತಿಯನ್ನು ನೀಡಿರುವುದಿಲ್ಲ. ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ರವರು ದಿನಾಂಕ: 16.12.2004 ರಂದು ವರದಿಯನ್ನು ಸಲ್ಲಿಸಿ ವಾಹನ ಮತ್ತು ಸೇಂದಿಯು ತಮ್ಮದೆಂದು ಹಕ್ಕು ಸಾಧನೆ ಮಾಡಲು ಮುಂದೆ ಬರದ ಕಾರಣ ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸೇಂದಿಯನ್ನು ನಾಶಪಡಿಸಲು ಕೋರಿರುತ್ತಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಸೇಂದಿಯನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 04.01.2005 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಈ ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 25 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಎರಡು (2) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಚಲಿತ ದಿನ ಪತ್ರಿಕೆಯಲ್ಲಾಗಲಿ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಾಗಲಿ ಪ್ರಕಟಣೆಯು ಇದುವರೆವಿಗೂ ಹೊರ ಬಿದ್ದಿರುವುದಿಲ್ಲ. ಆದ ಕಾರಣ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/86/2004-05, ದಿನಾಂಕ: 2ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಟಿವಿಎಸ್ 50 ಸಂಖ್ಯೆ: ಕೆಎ-11/ಇ-6255 ಮತ್ತು 25 ಲೀ. ಸೇಂದಿಯನ್ನು (ಸ್ಯಾಂಪಲ್ ಬಾಟಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಹೀಗೆ ಮುಟ್ಟುಗೋಲು ಹಾಕಿಕೊಂಡ ಸೇಂದಿಯನ್ನು ನಾಶಪಡಿಸಲು ಆದೇಶಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 416 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

**ಫಿರ್ಯಾದುದಾರರು**
ಅಬಕಾರಿ ಉಪ ನಿರೀಕ್ಷಕರು,
ಮದ್ದೂರು ಉಪವಲಯ.

**ಪ್ರತಿವಾದಿಗಳು**
ಆರ್. ಗಣೇಶ ಮೂರ್ತಿ ಬಿನ್ ರಾಮಸ್ವಾಮಿ,
ಅಂಚೀದೊಡ್ಡಿ, ಕಂದೇಗಾಲ ಅಂಚೆ, ಮಳವಳ್ಳಿ ತಾಲ್ಲೂಕು.

**ಮಾಲೀಕರು:**
ಎಸ್. ವೆಂಕಟಸ್ವಾಮಿ ಬಿನ್ ಸೊನ್ನಪ್ಪ, ಟೆಲಿಫೋನ್ ಎಕ್ಸ್‌ಚೇಂಜ್,
ವೈಟ್ ಫೀಲ್ಡ್, ಬೆಂಗಳೂರು-66

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 28.01.2005 ರಂದು ಬೆಳಗ್ಗೆ 10.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮದ್ದೂರು ಉಪ ವಲಯ - ಮದ್ದೂರು ತಾಲ್ಲೂಕು ಕೆ.ಎಂ. ದೊಡ್ಡಿಯಿಂದ ಮಳವಳ್ಳಿಗೆ ಹೋಗುವ 10ನೇ ಮೈಲಿಕಲ್ಲಿನ ಬಳಿ ವಾಹನ ಟಿವಿಎಸ್-ಎಕ್ಸ್‌ಎಲ್-ಸಂಖ್ಯೆ:ಕೆಎ-03/ಡಬ್ಲ್ಯೂ-377 ರಲ್ಲಿ 20 ಲೀ. ಸಾಮರ್ಥ್ಯವುಳ್ಳ ಪ್ಲಾಸ್ಟಿಕ್ ಕ್ಯಾನ್‌ನಲ್ಲಿ 20 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸೇಂದಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 12/04-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34, 38(ಎ) ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ಈ ಪ್ರಕರಣದಲ್ಲಿ ಆರೋಪಿಯಾದ ಆರ್. ಗಣೇಶ್ ಮೂರ್ತಿ ಬಿನ್ ರಾಮಸ್ವಾಮಿ ಅಂಚೀದೊಡ್ಡಿ ಗ್ರಾಮ, ಕಂದೇಗಾಲ ಅಂಚೆ, ಮಳವಳ್ಳಿ ತಾಲ್ಲೂಕು - ಇವರಿಗೆ ಆಪಾದನೆಯೂ ಮೇಲ್ನೋಟಕ್ಕೆ ಸಾಬೀತಾಗಿದ್ದು, ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ಈ ಪ್ರಾಧಿಕಾರದಿಂದ ದಿನಾಂಕ: 02.02.2005 ರಂದು ನೀಡಲಾಗಿದ್ದು, ಸದರಿ ನೋಟೀಸು ದಿನಾಂಕ: 07.02.2005 ರಂದು ಪ್ರತಿವಾದಿಗೆ ಜಾರಿಯಾಗಿದ್ದು ಸ್ವೀಕೃತಿಯೂ ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುತ್ತದೆ. ಪ್ರತಿವಾದಿಯೂ ಸದರಿ ನೋಟೀಸಿಗೆ ಪ್ರತಿಕ್ರಿಯಿಸಿ ದಿನಾಂಕ: 09.02.2005 ರಂದು ಲಿಖಿತ ಹೇಳಿಕೆ ಮತ್ತು ವಾಹನದ ದಾಖಲಾತಿಗಳನ್ನು ಹಾಜರುಪಡಿಸಿ ದಿನಾಂಕ: 28.01.2005 ರಂದು ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡಿರುತ್ತೇನೆ. ಮತ್ತು ವಾಹನ ಟಿವಿಎಸ್-ಎಕ್ಸ್‌ಎಲ್ ಸಂಖ್ಯೆ: ಕೆಎ-03/ಡಬ್ಲ್ಯೂ-377ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನ್ನ ಯಾವುದೇ ಅಭ್ಯಂತರವಿರುವುದಿಲ್ಲವೆಂದು ತಿಳಿಸಿರುತ್ತಾರೆ. ವಾಹನದ ದಾಖಲಾತಿಗಳ ಪ್ರಕಾರ ಎಸ್. ವೆಂಕಟಸ್ವಾಮಿ ಬಿನ್ ಸೊನ್ನಪ್ಪ ಎಂಬುವವರು ವಾಹನದ ಮಾಲೀಕರಾಗಿದ್ದು, ಸದರಿಯವರು ಆರ್. ಗಣೇಶ್ ಮೂರ್ತಿ ಎಂಬುವವರಿಗೆ ಮಾರಾಟ ಮಾಡಿ ಸಂಬಂಧಪಟ್ಟ ದಾಖಲಾತಿಗಳಿಗೆ ಎಸ್. ವೆಂಕಟಸ್ವಾಮಿ ರವರು ಸಹಿ ಮಾಡಿರುತ್ತಾರೆ. ಆರ್. ಗಣೇಶ್ ಮೂರ್ತಿರವರು ತಮ್ಮ ಹೆಸರಿಗೆ ವರ್ಗಾವಣೆ ಮಾಡಿಕೊಂಡಿರುವುದಿಲ್ಲ.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ಹಾಗೂ ರಾಜ್ಯದಲ್ಲಿ ಸೇಂದಿ ಮಾರಾಟವು ನಿಷೇಧವಿದ್ದು, ವಾಹನದಲ್ಲಿ ಯಾವುದೇ ದಾಖಲಾತಿಗಳಿಲ್ಲದೆ ಅಕ್ರಮವಾಗಿ 20 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ಅಪರಾಧವನ್ನು ಒಪ್ಪಿಕೊಂಡು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನ್ನ ಲಿಖಿತ ಹೇಳಿಕೆಯನ್ನು ನೀಡಿರುತ್ತಾರೆ. ಹಾಜರುಪಡಿಸಿರುವ ದಾಖಲಾತಿಗಳ ಪ್ರಕಾರ ವಾಹನವು ಆರೋಪಿಯದೇ ಎಂದು ದೃಢಪಟ್ಟಿದ್ದು ಇದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/111/2004-05, ದಿನಾಂಕ: 9ನೇ ಫೆಬ್ರವರಿ 2005**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಉಪ ವಲಯ ಮದ್ದೂರು - ರವರ ಪ್ರ.ಮಾ.ವ. ಸಂಖ್ಯೆ: 12/04-05, ದಿನಾಂಕ: 28.01.2005 ರಲ್ಲಿ ವಶಪಡಿಸಿಕೊಂಡ ವಾಹನ ಟಿವಿಎಸ್-ಎಕ್ಸ್‌ಎಲ್‌ಸಂಖ್ಯೆ: ಕೆಎ-03/ಡಬ್ಲ್ಯೂ-377 ನ್ನು ಮತ್ತು 20 ಲೀ. ಸೇಂದಿಯನ್ನು

(ಸ್ಯಾಂಪಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಈ ರೀತಿ ಮುಟ್ಟುಗೋಲು ಹಾಕಿಕೊಂಡಿರುವ ಸೇಂದಿಯನ್ನು ನಾಶಪಡಿಸಲು ಆದೇಶಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 417 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ಪ್ರತಿವಾದಿಗಳು** |
|---|---|
| ಅಬಕಾರಿ ಉಪ ನಿರೀಕ್ಷಕರು, ನಂ.1, | ಮಾದೇಶ್ ಬಿನ್ ಉದಯ್, ಕಲ್ಕುಣಿ ಗ್ರಾಮ, |
| ಗುಪ್ತವಾರ್ತಾ ವಿಭಾಗ, ಮೈಸೂರು ವಿಭಾಗ, ಮೈಸೂರು. | ಕಿರುಗಾವಲು ಹೋಬಳಿ, ಮಳವಳ್ಳಿ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 3.1.2005 ರಂದು ಸಾಯಂಕಾಲ 5.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ನಂ.1, ಗುಪ್ತ ವಾರ್ತಾ ವಿಭಾಗ, ಮೈಸೂರು ರವರು - ಮಳವಳ್ಳಿ ತಾಲ್ಲೂಕು, ಕಲ್ಕುಣಿ - ಬಿದರಹಳ್ಳಿ ರಸ್ತೆಯ, ಮಧ್ಯದಲ್ಲಿರುವ ಚಾನೆಲ್ ಹತ್ತಿರ, ವಾಹನ ಹಿರೋಹೊಂಡಾ ಸಂಖ್ಯೆ: ಕೆಎ-02/ಇ-5121 ರಲ್ಲಿ 50 ಲೀ. ಕಲಬೆರಕೆ ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸೇಂದಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 20/04-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ) 43 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ಈ ಪ್ರಕರಣದ ಆರೋಪಿಯಾದ ಮಾದೇಶ್ ಬಿನ್ ಉದಯ, ಕಲ್ಕುಣಿ ಗ್ರಾಮ, ಮಳವಳ್ಳಿ ತಾಲ್ಲೂಕು, ಕಿರುಗಾವಲು ಹೋಬಳಿ - ಇವರ ವಿರುದ್ಧ ಹೂಡಲಾಗಿರುವ ಆಪಾದನೆಯೂ ಮೇಲ್ನೋಟಕ್ಕೆ ಸಾಬೀತಾಗಿದ್ದು, ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ಈ ಪ್ರಾಧಿಕಾರದಿಂದ ದಿನಾಂಕ: 02.02.2005 ರಂದು ಜಾರಿ ಮಾಡಲು ಆದೇಶಿಸಲಾಗಿದೆ.

ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ರಾಜಾಜೀ ನಗರ ಬೆಂಗಳೂರು - ಇವರಿಗೆ ಈ ಪ್ರಾಧಿಕಾರದಿಂದ 02.02.2005 ರಂದು ಪತ್ರ ಬರೆಯಲಾಗಿದೆ.

ಅಬಕಾರಿ ನಿರೀಕ್ಷಕರು, ಮಳವಳ್ಳಿ ವಲಯ ರವರು ದಿನಾಂಕ: 10.02.2005 ರಂದು ವರದಿಯನ್ನು ಸಲ್ಲಿಸಿ ವಶಪಡಿಸಿಕೊಂಡ ಹಿರೋಹೊಂಡಾ ಸಂಖ್ಯೆ: ಕೆಎ-02/ಇ-5121ನ್ನು ಮತ್ತು ಸೇಂದಿಯು ತಮ್ಮದೆಂದು ಮಾಲೀಕತ್ವ ನಿರೂಪಿಸಲು ಯಾರೊಬ್ಬರು ಮುಂದೆ ಬಾರದ ಕಾರಣ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸೇಂದಿಯನ್ನು ನಾಶಪಡಿಸಲು ಕೋರಿರುತ್ತಾರೆ. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ರಾಜಾಜೀನಗರ, ಬೆಂಗಳೂರು-ಇವರು ನೀಡಿರುವ ವಾಹನದ ಮಾಲೀಕತ್ವವುಳ್ಳ ಬಿ ವಹಿಯನ್ನು ಅಡಕಗೊಳಿಸಿರುತ್ತಾರೆ. ಅದರಂತೆ ವರಪ್ರಸಾದ್ ಬಿನ್ ನಂಜುಂಡಪ್ಪ, ನಂ.386/ಎ, 14ನೇ ಮೈನ್, ಎಂ.ಆರ್.ಸಿ.ಆರ್. ವಿಜಯನಗರ, ಬೆಂಗಳೂರು-40, ಇವರ ಒಡೆತನದಲ್ಲಿರುವುದು ದೃಢಪಟ್ಟಿರುತ್ತದೆ.

ಮಾದೇಶ್ ಬಿನ್ ಉದಯ್-ಇವರು ದಿನಾಂಕ: 10.02.2005 ರಂದು ಈ ಪ್ರಾಧಿಕಾರಕ್ಕೆ ಲಿಖಿತ ಮೂಲಕ ಮನವಿಯನ್ನು ಸಲ್ಲಿಸಿ ಮೊಕದ್ದಮೆಗೆ ಮತ್ತು ನನಗೂ ಯಾವುದೇ ರೀತಿಯ ಸಂಬಂಧ ಇಲ್ಲವೆಂದು ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನ್ನ ಯಾವುದೇ ಅಭ್ಯಂತರವಿಲ್ಲವೆಂದು ತಿಳಿಸಿರುತ್ತಾರೆ.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ರಾಜ್ಯದಲ್ಲಿ ಸೇಂದಿ ಮಾರಾಟವು ನಿಷೇಧವಿದ್ದರೂ ಸಹ ವಾಹನದಲ್ಲಿ ಯಾವುದೇ ದಾಖಲಾತಿಗಳಿಲ್ಲದೆ ಅಕ್ರಮವಾಗಿ 50 ಲೀ. ಕಲಬೆರಕೆ ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ಕಾರಣ ಕೇಳುವ ನೋಟೀಸಿನಲ್ಲಿ ಮೊಕದ್ದಮೆಗೂ ನನಗೂ ಯಾವುದೇ ಸಂಬಂಧ ಇಲ್ಲವೆಂದು ತಿಳಿಸುತ್ತಾ ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನ್ನ ಲಿಖಿತ ಹೇಳಿಕೆಯನ್ನು ನೀಡಿರುತ್ತಾನೆ. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ ಬಿ ವಹಿಯ ರೀತ್ಯಾ ವರಪ್ರಸಾದ್ ಎಂಬುವವರು ವಾಹನದ ಒಡೆತನವನ್ನು ಹೊಂದಿದ್ದು, ವಾಹನ ಬಿಡುಗಡೆಗಾಗಿ ಈವರೆವಿಗೂ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ಪ್ರಕರಣ ದಾಖಲಾಗಿ ಸುಮಾರು ಒಂದು (1) ತಿಂಗಳು ಕಳೆದರೂ ವಾಹನ ಮಾಲೀಕರು ವಾಹನ ಮತ್ತು ಸೇಂದಿಯು ತಮ್ಮದೆಂದು ಹಕ್ಕು ಚಲಾಯಿಸಲು ಮುಂದೆ ಬಂದಿರುವುದಿಲ್ಲ. ಆದಕಾರಣ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಎ) ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/106/2004-05, ದಿನಾಂಕ: 19ನೇ ಫೆಬ್ರವರಿ 2005**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ನಂ.1, ಗುಪ್ತವಾರ್ತಾ ವಿಭಾಗ, ಮೈಸೂರು - ರವರ ಪ್ರ.ಮಾ.ವ. ಸಂಖ್ಯೆ: 20/04-05, ದಿನಾಂಕ: 03.01.2005 ರಲ್ಲಿ ವಶಪಡಿಸಿಕೊಂಡ ವಾಹನ ಹಿರೋಹೊಂಡಾ ಸಂಖ್ಯೆ: ಕೆಎ-02/ಇ-5121ನ್ನು ಮತ್ತು 50 ಲೀ. ಕಲಬೆರಕೆ ಸೇಂದಿಯನ್ನು (ಸ್ಯಾಂಪಲ್ ಬಾಟಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಈ ರೀತಿ ಮುಟ್ಟುಗೋಲು ಹಾಕಿಕೊಂಡಿರುವ ಸೇಂದಿಯನ್ನು ನಾಶಪಡಿಸಲು ಆದೇಶಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 418 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ಪ್ರಾಧಿಕಾರ**

**ಉಪಸ್ಥಿತರು:** ಶ್ರೀ ಜಿ.ಎಸ್. ಕರಿಯಪ್ಪ, ಭಾ.ಅ.ಸೇ., ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ

| **ಫಿರ್ಯಾದುದಾರರು** | **ವಿರುದ್ಧ** | **ಅಪರಾಧಿಗಳು** |
|---|---|---|
| ಪೊಲೀಸ್ ಸಬ್ ಇನ್ಸ್‌ಪೆಕ್ಟರ್, | | - ಇಲ್ಲ - |
| ಹಿರಿಯೂರು ಪೊಲೀಸ್ ಸ್ಟೇಷನ್, ಹಿರಿಯೂರು. | | |

**ವಾಹನದ ಮಾಲೀಕರು:** 1. ಶ್ರೀ ಜಗದೀಶ್ ಶೇಟ್ಟೈ ಬಿನ್ ಶ್ರೀ ದತ್ತರಾಮ್ ಶೇಟ್ಟೈ, ಕಮೀಷನ್ ಏಜೆಂಟ್, ನಂ.201, ವಾಸಪ್ಲಾಜ, ಮಾರ್ಕೆಟ್ ಯಾರ್ಡ್, ಕರಾಡ, ಸತಾರ ಜಿಲ್ಲೆ, ಮಹಾರಾಷ್ಟ್ರ ರಾಜ್ಯ.
2. ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಬ್ರಾಂಚ್ ಆಫೀಸ್, ಶ್ರೀ ಶಾರದಾ ಕಾಂಪ್ಲೆಕ್ಸ್, ಕೆ.ಎಸ್.ಆರ್.ಟಿ.ಸಿ. ಬಸ್‌ಸ್ಟ್ಯಾಂಡ್ ಎದುರು, ಚಿತ್ರದುರ್ಗ.

**ಅರ್ಜಿದಾರರ ವಕೀಲರು:** 1. ಶ್ರೀ ಪಿ.ಎಸ್. ಮಂಜುನಾಥ್ ಮತ್ತು ಶ್ರೀ ಎನ್.ಎಸ್. ಶ್ಯಾಂ ಸುಂದರ್, ವಕೀಲರು, ಚಿತ್ರದುರ್ಗ.
2. ಶ್ರೀ ಬಿ.ಎಸ್. ಚಂದ್ರಶೇಖರ್ ಮೂರ್ತಿ, ವಕೀಲರು, ಚಿತ್ರದುರ್ಗ.

**ಪ್ರಕರಣದ ಹಿನ್ನೆಲೆ:**

ದಿನಾಂಕ: 26.1.2001 ರಂದು ಬೆಳಗಿನ ಜಾವ ಸುಮಾರು 5.45 ಗಂಟೆ ಸಮಯದಲ್ಲಿ ಹಿರಿಯೂರು ತಾಲ್ಲೂಕು, ಹೊಸೂರು ಗ್ರಾಮದ ಬಳಿ ಪೂನಾ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿ ನಂ.4 ರಲ್ಲಿ ನಿಂತಿದ್ದ ಟಿ.ಎನ್.-28-ಡಿ-1595ರ ಲಾರಿಯ ಹಿಂಭಾಗಕ್ಕೆ ಕೆಎ-18-ಎಂ-248ರ ಮಹೇಂದ್ರ ಮಾರ್ಷಲ್ ಜೀಪ್ ಡಿಕ್ಕಿ ಹೊಡೆದು ಅಪಘಾತದಲ್ಲಿ ಅಪರಿಚಿತ ವಿಳಾಸ ವಗೈರೆ ಇಲ್ಲದ ಇಬ್ಬರು ಗಂಡು ಮಕ್ಕಳು ಸ್ಥಳದಲ್ಲೇ ಮೃತ ಪಟ್ಟಿದ್ದು, ಸದರಿ ಜೀಪಿನಲ್ಲಿ ಅಕ್ರಮವಾಗಿ ಕಳ್ಳತನದಿಂದ ಸಾಗಿಸುತ್ತಿದ್ದ ಶ್ರೀ ಗಂಧದ ತುಂಡುಗಳು ಕಂಡು ಬಂದಿರುತ್ತವೆ.

ಜೀಪನ್ನು ಪಂಚರ ಸಮಕ್ಷಮ ತಪಾಸಿಸಲಾಗಿ ಇದು ಬೂದಿ ಬಣ್ಣದ ಮಹೇಂದ್ರ ಕಂಪನಿಯ ಛಾಸ್ಸಿ ನಂ. MAINL-2AC-Y2F-10913 ಇರುವ ಮಾರ್ಷಲ್ ವಾಹನವಾಗಿರುತ್ತದೆ. ವಾಹನದ ಮಾಡೆಲ್ ಮಾರ್ಷಲ್ 2000 DX-2WD5DR-8 STR Vehicle SR No.2F-10913 Engine No.DY-55883 ಆಗಿರುತ್ತದೆ. ವಾಹನದ ಡಿಕ್ಕಿಯಲ್ಲಿ ಮರದ ತುಂಡುಗಳಿದ್ದು, ಪರಿಶೀಲಿಸಲಾಗಿ, ಶ್ರೀಗಂಧದ ತುಂಡುಗಳಾಗಿರುತ್ತವೆ. ಅಪಘಾತದ ಸ್ಥಳಕ್ಕೆ ತಕ್ಕಡಿಯನ್ನು ತರಿಸಿ ಶ್ರೀಗಂಧದ ತುಂಡುಗಳನ್ನು ತೂಕ ಮಾಡಿ ನೋಡಲಾಗಿದ್ದು, ತೂಕದ ವಿವರಗಳು ಈ ಕೆಳಗಿನಂತಿವೆ.

1. ಒಂದು ಗೋಣಿ ಚೀಲಕ್ಕೆ ತುಂಡುಗಳನ್ನು ತುಂಬಿ ತೂಕ ಮಾಡಲಾಗಿ ಸುಮಾರು 55 ಕೆ.ಜಿ. ಇದೆ.
2. ಇನ್ನೊಂದು ಗೋಣಿ ಚೀಲದಲ್ಲಿ ತುಂಡುಗಳನ್ನು ಹಾಕಿ ತೂಕ ಮಾಡಲಾಗಿ ಸುಮಾರು 40 ಕೆ.ಜಿ. ಇದೆ.
3. ಮತ್ತೊಂದು ಗೋಣಿ ಚೀಲದಲ್ಲಿ ತುಂಡುಗಳನ್ನು ಹಾಕಿ ತೂಕ ಮಾಡಲಾಗಿ ಸುಮಾರು 25 ಕೆ.ಜಿ. ಇದೆ.
4. ಒಂದು ಗಂಧದ ಮರದ ದಿಮ್ಮಿ ಸುಮಾರು 45 ಕೆ.ಜಿ. ಇರುತ್ತದೆ.

ಒಟ್ಟು ಸುಮಾರು 165 ಕೆ.ಜಿ. ತೂಕದ ಶ್ರೀಗಂಧ ಇರುತ್ತದೆ. ಒಂದು ಚಿಕ್ಕ ಶ್ರೀಗಂಧದ ತುಂಡನ್ನು ಸ್ಯಾಂಪಲ್‌ಗಾಗಿ ತೆಗೆದಿರಿಸಿಕೊಂಡು ಗೋಣಿ ಚೀಲಗಳ ಬಾಯಿ ಹೊಲಿಯಲಾಗಿದೆ. ಈ ಮಹಜರ್ ಕ್ರಮವನ್ನು ಕರ್ನಾಟಕ ಅರಣ್ಯ ಕಾಯ್ದೆ-1963 ಸೆಕ್ಷನ್-62ರ ಪ್ರಕಾರ ಎಲ್ಲಾ ವಿಧಿವಿಧಾನಗಳನ್ನು ಅನುಸರಿಸಿ ಜರುಗಿಸಿರುತ್ತಾರೆ. ನಂತರ ವಾಹನ ಮತ್ತು ಶ್ರೀಗಂಧದ ತುಂಡುಗಳನ್ನು ಅಮಾನತ್ತುಪಡಿಸಿಕೊಂಡು ಕಲಂ 279, 304 (ಎ) ಐಪಿಸಿ ಮತ್ತು ಕಲಂ 379 ರೆಡ್‌ವಿತ್ 86, 87 ಕರ್ನಾಟಕ ಅರಣ್ಯ ಕಾಯ್ದೆ ಯನ್ವಯ ಪೊಲೀಸ್ ಮೊಕದ್ದಮೆ ಸಂಖ್ಯೆ: 40/2001 ರನ್ವಯ ಕೇಸು ದಾಖಲಿಸಿ, ಪ್ರಥಮ ವರ್ತಮಾನ ವರದಿ, ಸ್ವತ್ತಿನ ಪಟ್ಟಿ ಸಂಖ್ಯೆ: 19/2001 ದಿನಾಂಕ: 26.1.2001 ರಲ್ಲಿ ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ಮಹಜರ್ ಕ್ರಮವನ್ನು ದಿನಾಂಕ: 26.1.2001ರ ಬೆಳಿಗ್ಗೆ 11.45ಕ್ಕೆ ಪ್ರಾರಂಭಿಸಿ ಮಧ್ಯಾಹ್ನ 1.00 ಗಂಟೆಯವರೆಗೆ ಜರುಗಿಸಿರುತ್ತಾರೆ.

ನಂತರ ಅಮಾನತ್ತು ಪಡಿಸಿಕೊಂಡಿರುವ ವಾಹನ ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ ಶ್ರೀಗಂಧವನ್ನು ಈ ಪ್ರಾಧಿಕಾರಕ್ಕೆ ಹಾಜರ್‌ಪಡಿಸಿ ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್ 71(ಎ) ಪ್ರಕಾರ ಮುಂದಿನ ಕ್ರಮ ಜರುಗಿಸುವ ಬಗ್ಗೆ ಒಪ್ಪಿಸಿರುತ್ತಾರೆ. ಈ ಪ್ರಾಧಿಕಾರವು ಶ್ರೀಗಂಧವನ್ನು ತನ್ನ ಸುಪರ್ದಿನಲ್ಲಿಟ್ಟುಕೊಂಡಿರುವಂತೆ ವಲಯ ಅರಣ್ಯಾಧಿಕಾರಿ, ಹಿರಿಯೂರು ವಲಯ, ಹಿರಿಯೂರು ಇವರಿಗೆ ಮತ್ತು ವಾಹನವನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರ ಸುಪರ್ದಿನಲ್ಲಿಟ್ಟುಕೊಂಡಿರುವಂತೆ ಸೂಚಿಸಲಾಯಿತು. ವಾಹನದ ಮಾಲೀಕರ ವಿವರಗಳನ್ನು ತಿಳಿದುಕೊಳ್ಳಲು ಈ ಪ್ರಾಧಿಕಾರವು ಆರ್.ಟಿ.ಓ., ಚಿಕ್ಕಮಗಳೂರು ಇವರಿಗೆ ಕೇಳಲಾಗಿ, ವಾಹನದ 'B' Extract ನೀಡಿದ್ದು, ಸದರಿ ವರದಿಯಲ್ಲಿನ ಛಾಸಿ ನಂಬರ್, ಇಂಜಿನ್ ನಂಬರ್‌ಗಳು ಅಮಾನತ್ತು ಪಡಿಸಿಕೊಂಡಿರುವ ವಾಹನದ ಛಾಸಿ ನಂ. ಇಂಜಿನ್ ಸಂಖ್ಯೆಗೆ ಹೊಂದಾಣಿಕೆ ಯಾಗಿರುವುದಿಲ್ಲ. ಈ ಮಧ್ಯೆ ಓರಿಯಂಟಲ್ ಇನ್‌ಶೂರೆನ್ಸ್ ಕಂಪನಿ ಲಿಮಿಟೆಡ್, ಚಿತ್ರದುರ್ಗ ರವರು ವಾಹನದ ರಿಜಿಸ್ಟ್ರೇಷನ್ ನಂಬರ್ ನೋಂದಣಿಯಾಗಿರುತ್ತದೆ. ನಂಬರ್ MH-11,H-7617 ಎಂಬುದಾಗಿ ತಿಳಿಸುತ್ತಾ, ಸದರಿ ವಾಹನವು ಮಹಾರಾಷ್ಟ್ರದಲ್ಲಿ ನೋಂದಣಿಯಾಗಿರುತ್ತದೆ ಹಾಗೂ ವಾಹನವನ್ನು ಮಾಲೀಕರ ವಶಕ್ಕೆ ನೀಡಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ವಾಹನದ ಆರ್.ಸಿ. ಪುಸ್ತಕದ ಪರಿಶೀಲನೆಯಿಂದ ಸದರಿ ವಾಹನದ ಮಾಲೀಕರು ಶ್ರೀ ಜಗದೀಶ್ ಶೇಟ್ಟೈ ಬಿನ್ ಶ್ರೀ ದತ್ತರಾಮ್ ಶೇಟ್ಟೈ, ಕಮೀಷನ್ ಏಜೆಂಟ್, ನಂ.201, ವಾಸಪ್ಲಾಜ, ಮಾರ್ಕೆಟ್ ಯಾರ್ಡ್, ಕರಾಡ, ಸತ್ತಾರ ಜಿಲ್ಲೆ, ಮಹಾರಾಷ್ಟ್ರ ಇವರಿಗೆ ಸೇರಿರುತ್ತದೆ. ವಾಹನದ ಮಾಲೀಕರು ವಾಹನವನ್ನು ಮಧ್ಯಂತರ ವಶಕ್ಕೆ ನಿಡುವಂತೆ ಕೋರಿ ದಿನಾಂಕ: 5.9.2001 ರಲ್ಲಿ ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿದ್ದು, ಅರ್ಜಿಯನ್ನು ಪರಿಶೀಲಿಸಿ, ಈ ಪ್ರಾಧಿಕಾರವು ತನ್ನ ದಿನಾಂಕ: 7.12.2001ರ ಆದೇಶದಲ್ಲಿ ತಿರಸ್ಕರಿಸಿರುತ್ತದೆ.

ಈ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ದಿನಾಂಕ: 27.9.2001, 16.10.2001, 7.12.2001, 12.1.2004, 22.1.2004, 4.2.2004, 17.3.2004, 28.4.2004, 27.7.2004, 10.8.2004, 18.10.2004, 10.11.2004, 30.11.2004, 23.12.2004 ಮತ್ತು 20.1.2005 ರಲ್ಲಿ ಪ್ರಕರಣವನ್ನು ವಿಚಾರಣೆಗೆ ಕರೆಯಲಾಯಿತು.

**ಅಭಿಯೋಜನೆ ಪರವಾಗಿ ಸಾಕ್ಷಿಗಳು:**

1. ಶ್ರೀ ಕೆ. ರಾಮಚಂದ್ರ ಬಿನ್ ಶ್ರೀ ಕಾಳಿಯ ಮೂರ್ತಿ, ಲಾರಿ ಚಾಲಕ (TN-28 D-1595) ಸಸಮಳ್ಳೂರು, ಪೆರಂಬಳೂರು ಜಿಲ್ಲೆ, ತಮಿಳುನಾಡು.
2. ಶ್ರೀ ವೈ. ರಾಮಯ್ಯ ಬಿನ್ ಶ್ರೀ ಯಲ್ಲಪ್ಪ, ಪಟ್ರೆಹಳ್ಳಿ, ಹಿರಿಯೂರು.
3. ಶ್ರೀ ಈಶ್ವರನ್, ಪಿ.ಸಿ.ಐ., ಹಿರಿಯೂರು ವೃತ್ತ, ಹಿರಿಯೂರು.
4. ಶ್ರೀ ಅಬ್ದುಲ್ ರೆಹಮಾನ್, ಪಿ.ಎಸ್.ಐ, ಹಿರಿಯೂರು.
5. ಶ್ರೀ ಟಿ. ತಿಮ್ಮಪ್ಪ, ವಲಯ ಅರಣ್ಯಾಧಿಕಾರಿ, ಹಿರಿಯೂರು ವಲಯ, ಹಿರಿಯೂರು.

**ಪ್ರತಿವಾದಿ (ಅರ್ಜಿದಾರರ) ಪರವಾಗಿ ಸಾಕ್ಷಿಗಳು:**

1. ಶ್ರೀ ಜಗದೀಶ್ ಶೇಟ್ಟೈ ಬಿನ್ ಶ್ರೀ ದತ್ತರಾಮ್ ಶೇಟ್ಟೈ, ಕಮೀಷನ್ ಏಜೆಂಟ್, ನಂ.201, ವಾಸಪ್ಲಾಜ, ಮಾರ್ಕೆಟ್ ಯಾರ್ಡ್, ಕರಾಡ, ಸತಾರ ಜಿಲ್ಲೆ, ಮಹಾರಾಷ್ಟ್ರ.

2. ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಚಿತ್ರದುರ್ಗ.

ಅಭಿಯೋಜನೆ ಪರ ಸಹಾಯಕ ಅಭಿಯೋಗ ನಿರ್ದೇಶಕರು, ಚಿತ್ರದುರ್ಗ ಇವರು ಮಂಡಿಸಿರುವ ಲಿಖಿತ ವಾದವನ್ನು ಮತ್ತು 1ನೇ ಪ್ರತಿವಾದಿಪರ ವಕೀಲರು ಮಂಡಿಸಿರುವ ಲಿಖಿತ ವಾದವನ್ನು 1ನೇ ಪ್ರತಿವಾದಿ ಶ್ರೀ ದತ್ತರಾಮ್ ಶೇಟ್ಟೈ ಇವರು ನೀಡಿರುವ ಹೇಳಿಕೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸೂಕ್ತ ನಿರ್ಣಯ ನೀಡಲು ಈ ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

**ಅಂಶ-1:**

ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾದ ವಾಹನ ಮಹೇಂದ್ರ ಮಾರ್ಷಲ್ ಜೀಪು ಸಂಖ್ಯೆ: MH-11, H-7617 ನ್ನು ಶ್ರೀಗಂಧದ ಸಮೇತ ಅಮಾನತ್ತುಪಡಿಸಿಕೊಳ್ಳಲಾಗಿದೆಯೇ? ಅಮಾನತ್ತುಪಡಿಸುವಾಗ ಕರ್ನಾಟಕ ಅರಣ್ಯ ಸಂರಕ್ಷಣಾ ಕಾಯ್ದೆ-1963ರ ಕಲಂ 62ರ ಪ್ರಕಾರ ಕ್ರಮ ಬದ್ಧವಾಗಿ ಅಮಾನತ್ತುಪಡಿಸಲಾಗಿದೆಯೇ?

**ಅಂಶ-2:**

ಅಮಾನತ್ತುಪಡಿಸಲಾಗಿರುವ ಮಹೇಂದ್ರ ಮಾರ್ಷಲ್ ಜೀಪಿನಲ್ಲಿದ್ದ ಮಾಲು ಸರ್ಕಾರದ ಸ್ವತ್ತು ಎಂದು ಘೋಷಿಸಲಾಗಿರುವ ಶ್ರೀಗಂಧವೇ?

**ಅಂಶ-3:**

ಅಮಾನತ್ತುಪಡಿಸಲಾಗಿರುವ ಮಹೇಂದ್ರ ಮಾರ್ಷಲ್ ಜೀಪಿನ ಮಾಲೀಕರು ವಾಹನವನ್ನು ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ಬಳಸಲಾಗಿರುವುದಿಲ್ಲ ಎಂಬುದನ್ನು ಸಾಬೀತುಪಡಿಸಿರುವರೆ ಅಥವಾ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮ ಕೈಗೊಂಡಿರುವರೆ?

ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.

ಅಂಶ-1 - ಸಕಾರಾತ್ಮಕ

ಅಂಶ-2 - ಸಕಾರಾತ್ಮಕ

ಅಂಶ-3 - ನಕಾರಾತ್ಮಕ

**ಕಾರಣಗಳನ್ನು ಈ ಕೆಳಗೆ ವಿವರಿಸಲಾಗಿದೆ**

**ಅಂಶ-1:**

ಹಿರಿಯೂರು ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ತಮ್ಮ ಠಾಣೆ ಗುನ್ಹೆ ಸಂಖ್ಯೆ: 40/2001 ಕಲಂ 279, 304 ಐಪಿಸಿ ಮತ್ತು ಕಲಂ 379 ರೆಡ್‌ವಿತ್ 86, 87 ಕರ್ನಾಟಕ ಅರಣ್ಯ ಕಾಯ್ದೆ ಕೇಸಿನಲ್ಲಿ ದಿನಾಂಕ: 26.1.2001 ರಂದು ಬೆಳಿಗ್ಗೆ 11.45 ಗಂಟೆಗೆ ಹಿರಿಯೂರು ತಾಲ್ಲೂಕು, ಹೊಸೂರು ಗ್ರಾಮದ ಸಮೀಪದಲ್ಲಿ ಪೂನಾ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿ ನಂ.4 ರಲ್ಲಿ ಪಂಚಾಯ್ತಿದಾರರ ಸಮಕ್ಷಮ ಸ್ಥಳವನ್ನು ಅಜಮಾಯಿಸಿ ನೋಡಿ ಸದರಿ ಸ್ಥಳದಲ್ಲಿ ಅಪಘಾತ ಸಂಭವಿಸಿದ್ದು ಈ ಸ್ಥಳದಿಂದ ಸುಮಾರು 4 ಅಡಿ ದೂರದಲ್ಲಿ ಅಪಘಾತಕ್ಕೀಡಾದ ಲಾರಿ ನಂ. TN-28-D-1595 ನಿಂತಿದ್ದು, ಕೃತ್ಯ ನಡೆದ ಸ್ಥಳದಿಂದ ಸುಮಾರು 30 ಅಡಿ ದೂರದಲ್ಲಿ ಅಪಘಾತಗೊಂಡ KA-18-M-248 ವಾಹನ ನಿಂತಿದ್ದು, ಅಜಮಾಯಿಸಲಾಗಿ ಇದು ಮಹೇಂದ್ರ ಕಂಪನಿಯ ಛಾಸ್ಸಿ ಸಂಖ್ಯೆ: MAINL-2AC-Y2F-10913 ಇರುವ ಮಾರ್ಷಲ್ ಬೂದಿ ಬಣ್ಣದ ವಾಹನವಾಗಿದೆ. ಮಾಡಲ್ ಮಾರ್ಷಲ್ 2000 DX-2WD 5DR-8 STR Vehicle SR No.2F-10913 Engine No. DY-55883 ಇರುತ್ತದೆ.

ಸದರಿ ಜೀಪನ್ನು ಪಂಚರ ಸಮಕ್ಷಮ ತಪಾಸಿಸಲಾಗಿ ವಾಹನದ ಡಿಕ್ಕಿಯಲ್ಲಿ ಶ್ರೀಗಂಧದ ತುಂಡುಗಳಿರುತ್ತವೆ. ಅಪಘಾತ ನಡೆದ ಸ್ಥಳಕ್ಕೆ ತಕ್ಕಡಿಯನ್ನು ತರಿಸಿ ಶ್ರೀಗಂಧವನ್ನು ತೂಕ ಮಾಡಿ ನೋಡಿದಾಗ ಒಟ್ಟು ಸುಮಾರು 165 ಕೆ.ಜಿ. ಶ್ರೀಗಂಧ ಇರುತ್ತದೆ. ವಾಹನವನ್ನು ಮತ್ತು ಶ್ರೀಗಂಧವನ್ನು ಅಮಾನತ್ತು ಪಡಿಸಿಕೊಂಡಿರುತ್ತಾರೆ. ನಂತರ ಅಮಾನತ್ತುಪಡಿಸಿಕೊಂಡ ಮಾಲನ್ನು ಠಾಣಾ ಮಾಲುಪಟ್ಟಿ ನಂ.19/2001 ದಿನಾಂಕ: 26.1.2001 ರಲ್ಲಿ ನಮೂದಿಸಿರುತ್ತಾರೆ. ಪ್ರಥಮ ವರ್ತಮಾನ ವರದಿ ಮತ್ತು ಮಾಲು ಪಟ್ಟಿ ಸಂಖ್ಯೆ: 19/2001ನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಒಟ್ಟಿನಲ್ಲಿ ವಾಹನ ಮಹೇಂದ್ರ ಮಾರ್ಷಲ್ ಜೀಪನ್ನು ಮತ್ತು ಶ್ರೀಗಂಧವನ್ನು ಅಮಾನತ್ತುಪಡಿಸುವಾಗ ಮತ್ತು ಮಹಜರ್ ನಡೆಸುವಾಗ ಕಲಂ 62ರ ಕರ್ನಾಟಕ ಅರಣ್ಯ ಕಾಯ್ದೆ-1963ರ ಪ್ರಕಾರ ನಿಯಮಗಳನ್ನು ಪಾಲಿಸಿರುತ್ತಾರೆ.

ಸದರಿ ಪ್ರಕರಣವು ಅರಣ್ಯ ಕಾಯ್ದೆಗಳ ಉಲ್ಲಂಘನೆಗೆ ಸಂಬಂಧಪಟ್ಟಿದ್ದರಿಂದ ಮುಂದಿನ ನಡವಳಿಕೆ ನಡೆಸುವ ಬಗ್ಗೆ ವಾಹನ ಮತ್ತು ಶ್ರೀಗಂಧವನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಅಮಾನತ್ತುಗೊಳಿಸಲಾದ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಹಿರಿಯೂರು ರವರು ಪರಿಶೀಲಿಸಿ, ಶ್ರೀಗಂಧವೆಂದು ದೃಢೀಕರಿಸಿರುತ್ತಾರೆ.

1ನೇ ಪ್ರತಿವಾದಿ ಶ್ರೀ ಜಗದೀಶ್ ಶೇಟ್ಟೈ ಬಿನ್ ಶ್ರೀ ದತ್ತರಾಮ್ ಶೇಟ್ಟೈ, ಕಮೀಷನ್ ಏಜೆಂಟ್, ನಂ.201, ವಾಸಪ್ಲಾಜ, ಮಾರ್ಕೆಟ್ ಯಾರ್ಡ್, ಕರಾಡ, ಸತಾರ ಜಿಲ್ಲೆ, ಮಹಾರಾಷ್ಟ್ರ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 10.8.2004 ರಂದು ನೀಡಿರುವ ಹೇಳಿಕೆಯಲ್ಲಿ ವಾಹನವು ತೀವ್ರವಾಗಿ ಜಖಂಗೊಂಡಿರುವುದರಿಂದ ವಾಹನದ ವಿಮಾ ಪರಿಹಾರ ಪಡೆದಿರುವುದರಿಂದ ವಾಹನದ ಮೇಲೆ ಅವರಿಗೆ ಯಾವುದೇ ಹಕ್ಕು ಅಥವಾ ಅಧಿಕಾರ ಇರುವುದಿಲ್ಲ ಎಂದು ಹೇಳಿಕೆ ನೀಡಿರುತ್ತಾರೆ ಹಾಗೂ ವಾಹನವನ್ನು ಈ ಪ್ರಾಧಿಕಾರವು ಕಾನೂನು ಪ್ರಕಾರ ವಿಲೇ ಮಾಡಲು ಅಭ್ಯಂತರ ಇರುವುದಿಲ್ಲ ಎಂದು ಹೇಳಿಕೆ ನೀಡಿರುತ್ತಾರೆ. 1ನೇ ಪ್ರತಿವಾದಿಪರ ವಕೀಲರು ದಿನಾಂಕ: 10.8.2004 ರಲ್ಲಿ ಪ್ರತಿವಾದಿಗಳು ನೀಡಿರುವ ಹೇಳಿಕೆಯಂತೆ ದೃಢೀಕರಿಸಿ ಅರ್ಜಿ ಸಲ್ಲಿಸಿರುತ್ತಾರೆ.

ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಚಿತ್ರದುರ್ಗ ಇವರು ದಿನಾಂಕ: 9.9.2004 ರಂದು ಮನವಿ ಸಲ್ಲಿಸಿ, ವಾಹನವನ್ನು ವಶಕ್ಕೆ ನೀಡುವಂತೆ ಕೋರಿದ್ದು, ಈ ಸಂಬಂಧ 2ನೇ ಪ್ರತಿವಾದಿಯಾಗಿ ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಚಿತ್ರದುರ್ಗ ಇವರನ್ನು, ಇವರ ಪರ ವಕಾಲತ್ತು ಸಲ್ಲಿಸಿರುವ ವಕೀಲರನ್ನು ಹಾಗೂ ಸಾಕ್ಷಿದಾರರನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗುವಂತೆ ಈ ಕೆಳಗೆ ನಮೂದಿಸಿದ ದಿನಾಂಕಗಳಂದು ಪ್ರಕರಣವನ್ನು ಕರೆಸಲಾಗಿತ್ತು.

ಮೊದಲನೇ ಬಾರಿ ಪ್ರಕರಣವನ್ನು ದಿನಾಂಕ: 18.10.2004 ರಂದು 3.00 ಗಂಟೆಗೆ ನಿಗದಿಪಡಿಸಿ, ಈ ಪ್ರಾಧಿಕಾರದಿಂದ ಸಂಬಂಧಿಸಿದ ಎಲ್ಲರಿಗೂ ದಿನಾಂಕ: 22.9.2004 ರಂದು ನೋಂದಾಯಿತ ಸ್ವೀಕೃತಿ ಅಂಚೆ ಮೂಲಕ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿಯವರುಗಳಿಗೆ

ನೋಟೀಸ್ ಜಾರಿಯಾಗಿದ್ದಕ್ಕೆ ಸ್ವೀಕೃತಿಗಳನ್ನು ನೀಡಿರುತ್ತಾರೆ. ಕಾರಣಾಂತರದಿಂದ ಸದರಿ ಪ್ರಕರಣದ ದಿನಾಂಕವನ್ನು ಮುಂದೂಡಿ ದಿನಾಂಕ: 30.11.2004 ರಂದು 3.15 ಗಂಟೆಗೆ ಮರುನಿಗದಿಪಡಿಸಿ ಈ ಪ್ರಾಧಿಕಾರದಿಂದ ಸಂಬಂಧಿಸಿದವರಿಗೆ ದಿನಾಂಕ: 8/9.11.2004 ರಂದು ನೋಂದಾಯಿತ ಸ್ವೀಕೃತಿ ಅಂಚೆ ಮೂಲಕ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿಯವರುಗಳಿಗೆ ದಿನಾಂಕ: 10.11.2004 ಮತ್ತು 12.11.2004 ರಲ್ಲಿ ನೋಟೀಸ್ ಜಾರಿಯಾಗಿದ್ದಕ್ಕೆ ಸ್ವೀಕೃತಿ ನೀಡಿರುತ್ತಾರೆ. ದಿನಾಂಕ: 30.11.2004 ರಂದು ನಡೆದ ಪ್ರಕರಣದಲ್ಲಿ ಸರ್ಕಾರಿ ವಕೀಲರು ಹಾಜರಾಗಿದ್ದರು, ಸಾಕ್ಷಿದಾರರಾದ ಶ್ರೀ ವೈ. ರಾಮಯ್ಯ ಹಾಜರಿದ್ದರು, 2ನೇ ಪ್ರತಿವಾದಿ ಮತ್ತು ಅವರ ಪರ ವಕೀಲರು ಗೈರು ಹಾಜರಾಗಿದ್ದರು ಮತ್ತು ಇತರೆ ಸಾಕ್ಷಿದಾರರು ಗೈರು ಹಾಜರಾಗಿದ್ದರು.

ಎರಡನೇ ಬಾರಿ ಪ್ರಕರಣವನ್ನು ದಿನಾಂಕ: 23.12.2004 ರಂದು 3.00 ಗಂಟೆಗೆ ನಿಗದಿಪಡಿಸಿ ಈ ಪ್ರಾಧಿಕಾರದಿಂದ ದಿನಾಂಕ: 2/6.12.2004 ರಂದು ಪೊಲೀಸ್ ವೃತ್ತ ನಿರೀಕ್ಷಕರು, ಹಿರಿಯೂರು ವೃತ್ತ, ಹಿರಿಯೂರು ಇವರಿಗೆ ಸಾಕ್ಷಿದಾರರನ್ನು ಹಾಜರುಪಡಿಸುವಂತೆ ಸಮನ್ಸ್‌ನೊಂದಿಗೆ ನೋಂದಾಯಿತ ಸ್ವೀಕೃತಿ ಅಂಚೆ ಮೂಲಕ ಮತ್ತು 2ನೇ ಪ್ರತಿವಾದಿ, ಅವರ ಪರ ವಕೀಲರಿಗೆ ಹಾಗೂ ಇತರರಿಗೆ ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್ ಮೂಲಕ ನೋಟೀಸ್ ಜಾರಿಮಾಡಲಾಗಿತ್ತು. ಪೊಲೀಸ್ ವೃತ್ತ ನಿರೀಕ್ಷಕರು, ಹಿರಿಯೂರು ವೃತ್ತ, ಹಿರಿಯೂರು ಇವರಿಗೆ ದಿನಾಂಕ: 8.12.2004 ರಂದು ಅಂಚೆ ಮೂಲಕ ನೋಟೀಸ್ ತಲುಪಿದ್ದಕ್ಕೆ ಸ್ವೀಕೃತಿ ನೀಡಿದ್ದಾರೆ. ದಿನಾಂಕ: 23.12.2004 ರಂದು ನಡೆದ ಪ್ರಕರಣದಲ್ಲಿ ಸಾಕ್ಷಿದಾರರಾದ ಶ್ರೀ ವೈ. ರಾಮಯ್ಯ ಇವರು ಮಾತ್ರ ಹಾಜರಿದ್ದರು 2ನೇ ಪ್ರತಿವಾದಿ ಮತ್ತು ಅವರ ಪರ ವಕೀಲರು, ಸರ್ಕಾರಿ ವಕೀಲರು ಹಾಗೂ ಇತರೆ ಸಾಕ್ಷಿಗಳು ಗೈರು ಹಾಜರಾಗಿದ್ದರು.

ಮೂರನೇ ಬಾರಿ ಪ್ರಕರಣವನ್ನು ದಿನಾಂಕ: 20.1.2005 ರಂದು 3.15 ಗಂಟೆಗೆ ನಿಗದಿಪಡಿಸಿ ಈ ಪ್ರಾಧಿಕಾರದಿಂದ ಸಂಬಂಧಿಸಿದ ಎಲ್ಲರಿಗೂ ದಿನಾಂಕ: 27/29.12.2004 ರಂದು ನೋಂದಾಯಿತ ಸ್ವೀಕೃತಿ ಅಂಚೆ ಮೂಲಕ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸ್ ಪೊಲೀಸ್ ವೃತ್ತ ನಿರೀಕ್ಷಕರು, ಹಿರಿಯೂರು ವೃತ್ತ, ಹಿರಿಯೂರು ಹಾಗೂ 2ನೇ ಪ್ರತಿವಾದಿ ಮತ್ತು ಅವರ ಪರ ವಕೀಲರಿಗೆ ದಿನಾಂಕ: 31.12.2004 ರಲ್ಲಿ ಜಾರಿಯಾಗಿದ್ದಕ್ಕೆ ಸ್ವೀಕೃತಿ ನೀಡಿರುತ್ತಾರೆ. ಸದರಿ ನೋಟೀಸ್‌ನಲ್ಲಿ ವಿಚಾರಣಾ ದಿನಾಂಕದಂದು ಈ ಪ್ರಾಧಿಕಾರದ ಮುಂದೆ ಹಾಜರಾಗಲು ವಿಫಲರಾದಲ್ಲಿ ಪ್ರಕರಣವನ್ನು ನಿಮ್ಮ ಗೈರು ಹಾಜರಿಯಲ್ಲಿ ಏಕ ಪಕ್ಷೀಯವಾಗಿ ತೀರ್ಮಾನ ಮಾಡಲಾಗುವುದು ಎಂದು ಸಹಾ ನಮೂದಿಸಲಾಗಿತ್ತು. ದಿನಾಂಕ: 20.1.2005 ರಂದು ನಡೆದ ಪ್ರಕರಣದಲ್ಲಿ ಸರ್ಕಾರಿ ವಕೀಲರು ಹಾಜರಿದ್ದರು. 2ನೇ ಪ್ರತಿವಾದಿ ಮತ್ತು ಅವರ ಪರ ವಕೀಲರು ಗೈರು ಹಾಜರಾಗಿದ್ದರು ಮತ್ತು ಇತರೆ ಸಾಕ್ಷಿದಾರರು ಗೈರು ಹಾಜರಾಗಿದ್ದರು.

ಈ ಸಂಬಂಧ ಸರ್ಕಾರಿ ವಕೀಲರು, ಚಿತ್ರದುರ್ಗ ರವರು ತಮ್ಮ ಅಭಿಪ್ರಾಯವನ್ನು ಮಂಡಿಸುತ್ತಾ, ಈ ಪ್ರಾಧಿಕಾರದಿಂದ ಈಗಾಗಲೇ 3 ಬಾರಿ ಕಾಲಾವಕಾಶವನ್ನು ನೀಡಲಾಗಿದ್ದರೂ ಸಹ 2ನೇ ಪ್ರತಿವಾದಿಯಾಗಲೀ, ಅವರ ಪರ ವಕಾಲತ್ತು ಸಲ್ಲಿಸಿರುವ ವಕೀಲರಾಗಲಿ ಮತ್ತು ಸಾಕ್ಷಿದಾರರಾಗಲಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಅಹವಾಲು ಸಲ್ಲಿಸಿರುವುದಿಲ್ಲ ಮತ್ತು ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಚಿತ್ರದುರ್ಗ ಇವರು ದಿನಾಂಕ: 9.9.2004 ರಂದು ವಾಹನವನ್ನು ಅವರ ವಶಕ್ಕೆ ನೀಡಬೇಕೆಂದು ಕೋರಿರುವ ಪತ್ರದಲ್ಲಿ ವಾಹನ ಬಿಡುಗಡೆಗೆ ಯಾವುದೇ ತಕರಾರು/ಕಾರಣಗಳನ್ನು ಸಲ್ಲಿಸಿರುವುದಿಲ್ಲ. ಆದ ಪ್ರಯುಕ್ತ ಕಾನೂನಿನ್ವಯ ಪ್ರಾಧಿಕಾರವು ಮುಂದಿನ ಕ್ರಮ ಕೈಗೊಳ್ಳಬಹುದೆಂದು ಮತ್ತು ಏಕ ಪಕ್ಷೀಯವಾಗಿ ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ತಮ್ಮ ಅಭಿಪ್ರಾಯವನ್ನು ಮಂಡಿಸಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿದಾಗ, ಈ ಪ್ರಕರಣದಲ್ಲಿ ಮಹೇಂದ್ರ ಮಾರ್ಷಲ್ ಜೀಪ್ ಸಂಖ್ಯೆ: MH-11, H-7617ನ್ನು ಶ್ರೀಗಂಧ ಸಮೇತ ವಶಪಡಿಸಿಕೊಂಡಿರುವುದು ಖಚಿತವಾಗಿದೆ ಹಾಗೂ ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ-62ರ ಪ್ರಕಾರ ಕ್ರಮ ಬದ್ಧವಾಗಿ ಅಮಾನತ್ತು ಪಡಿಸಲಾಗಿದೆ ಎಂಬುದು ದೃಢಪಟ್ಟಿರುತ್ತದೆ.

**ಅಂಶ-2:**

ಕಲಂ-80, 84 ಕರ್ನಾಟಕ ಅರಣ್ಯ ಕಾಯ್ದೆ-1963ರ ಪ್ರಕಾರ ಶ್ರೀಗಂಧವು ಎಲ್ಲಿ ಬೆಳೆದರೂ ರಾಜ್ಯ ಸರ್ಕಾರದ ಸ್ವತ್ತಾಗಿರುತ್ತದೆ. ಸೆಕ್ಷನ್-50 ಕರ್ನಾಟಕ ಅರಣ್ಯ ಕಾಯ್ದೆ-1963 ಕರ್ನಾಟಕ ಅರಣ್ಯ ನಿಯಮಗಳು-1969, ನಿಯಮ-154 ಮತ್ತು 155 ಪ್ರಸ್ತುತ ಪಡಿಸುವುದೇನೆಂದರೆ, ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಪ್ರಕರಣ ದಾಖಲಾದ ಬಳಿಕ ಅಂತಹ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಶ್ರೀಗಂಧವನ್ನು ರಾಜ್ಯ ಸರ್ಕಾರದ ಸ್ವತ್ತು ಎಂದೇ ಪರಿಗಣಿಸಲಾಗುತ್ತಿದೆ. ವಲಯ ಅರಣ್ಯಾಧಿಕಾರಿ, ಹಿರಿಯೂರು ವಲಯ, ಹಿರಿಯೂರು ರವರು ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಮಾಲನ್ನು ಪರಿಶೀಲಿಸಿ ವಶಪಡಿಸಿಕೊಂಡಿರುವ ಮಾಲು ಶ್ರೀಗಂಧವೇ ಎಂದು ದೃಢೀಕರಿಸಿ ಪ್ರಮಾಣ ಪತ್ರ ಸಲ್ಲಿಸಿರುತ್ತಾರೆ. ಆದುದರಿಂದ ಅಮಾನತ್ತು ಪಡಿಸಿಕೊಂಡ ಮಹೇಂದ್ರ ಮಾರ್ಷಲ್ ಜೀಪ್ ಸಂಖ್ಯೆ: MH-11, H-7617 ರಲ್ಲಿ ಇದ್ದ ಮಾಲು ಶ್ರೀಗಂಧವೇ ಆಗಿರುತ್ತದೆ ಎಂಬುದು ದೃಢಪಟ್ಟಿರುತ್ತದೆ.

**ಅಂಶ-3:**

ಈ ಪ್ರಕರಣದಲ್ಲಿ ಮಹೇಂದ್ರ ಮಾರ್ಷಲ್ ಜೀಪ್ ಸಂಖ್ಯೆ: MH-11, H-7617ರ ಮಾಲೀಕರಾದ ಶ್ರೀ ಜಗದೀಶ್ ಶೆಟ್ಟೈ ಬಿನ್ ಶ್ರೀ ದತ್ತಾರಾಂ ಶೆಟ್ಟೈ ಇವರು ವಿಚಾರಣಾ ಸಮಯದಲ್ಲಿ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ತೊಡಗದಂತೆ ಯಾವುದೇ ರೀತಿಯ ಮುಂಜಾಗ್ರತ ಕ್ರಮಗಳನ್ನು ತೆಗೆದುಕೊಂಡಿರುವುದು ಲಭ್ಯವಿರುವ ದಾಖಲಾತಿಗಳನ್ವಯ ಕಂಡು ಬಂದಿರುವುದಿಲ್ಲ ಹಾಗೂ ಯಾವುದೇ ದಾಖಲೆಗಳನ್ನು ಸಹ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವುದಿಲ್ಲ.

ಭಾರತೀಯ ದಂಡ ಸಂಹಿತೆ ಸೆಕ್ಷನ್-101 ಮತ್ತು 106 ರನ್ವಯ ಮತ್ತು ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್ 71(ಬಿ)(2) ರನ್ವಯ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರಿಗೆ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿಲ್ಲ ಎಂಬುದನ್ನು ಸಾಬೀತುಪಡಿಸುವ ಜವಾಬ್ದಾರಿಯು ಇರುತ್ತದೆ. ಪ್ರಕರಣದಲ್ಲಿ ದಾಖಲಾತಿಗಳನ್ನು ಪರಿಶೀಲಿಸಿದಾಗ ವಾಹನದ ಮಾಲೀಕರು ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ದುರ್ಬಳಕೆಯಾಗದಂತೆ ಸಮರ್ಪಕ ಮುಂಜಾಗೃತೆ ಕ್ರಮ ತೆಗೆದುಕೊಂಡಿಲ್ಲದಿರುವುದು ದೃಢಪಟ್ಟಿರುತ್ತದೆ. 2ನೇ ಪ್ರತಿವಾದಿಯಾದ ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಚಿತ್ರದುರ್ಗ ಇವರಿಗೆ ಅವರ ವಾದವನ್ನು ಮಂಡಿಸಲು 3 ಬಾರಿ ಅವಕಾಶ ನೀಡಿದ್ದರೂ ಸಹ ಸದರಿಯವರು ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ವಾದವನ್ನು ಮಂಡಿಸಲು ವಿಫಲರಾಗಿದ್ದಾರೆ.

ಆದ್ದರಿಂದ ಅಂಶ-3 ನಕಾರಾತ್ಮಕ ಎಂದು ಸಮರ್ಥಿಸಿದೆ.

1ನೇ ಪ್ರತಿವಾದಿ ಹೇಳಿಕೆ, 1ನೇ ಪ್ರತಿವಾದಿ ಪರ ವಕೀಲರ ಲಿಖಿತ ಹೇಳಿಕೆ ಹಾಗೂ ದಿ ಓರಿಯಂಟಲ್ ಇನ್ಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಚಿತ್ರದುರ್ಗ ಇವರು ಮತ್ತು ಇವರ ಪರ ವಕೀಲರು ಹಾಗೂ ಸಾಕ್ಷಿದಾರರುಗಳ ಗೈರು ಹಾಜರಿ ಮತ್ತು ಅಭಿಯೋಜನೆ ಪರ ಸಹಾಯಕ ಅಭಿಯೋಗ ನಿರ್ದೇಶಕರು, ಚಿತ್ರದುರ್ಗ ಇವರುಗಳ ಲಿಖಿತ ಹೇಳಿಕೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ನೀಡಿದೆ.

**ಆದೇಶ**

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಜಿ.ಎಸ್. ಕರಿಯಪ್ಪ, ಭಾಅಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ-1963ರ ಸೆಕ್ಷನ್ 71(ಎ) ಪ್ರಕಾರ ಪ್ರಸ್ತುತ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ವಾಹನ ಮಹೇಂದ್ರ ಮಾರ್ಷಲ್ ಜೀಪು ಸಂಖ್ಯೆ: MH-11-H-7617, ಇಂಜಿನ್ ನಂ. DY-55883, ಛಾಸಿ ನಂ. MAINL-2AC-Y2F-10913 ಮತ್ತು ಅದರಲ್ಲಿ ಸಾಗಿಸುತ್ತಿದ್ದ 165 ಕೆ.ಜಿ. ಶ್ರೀಗಂಧವನ್ನು ಸರ್ಕಾರದ ಪರವಾಗಿ ಏಕ ಪಕ್ಷೀಯವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಸದರಿ ವಾಹನ ಮತ್ತು ಶ್ರೀಗಂಧವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿದೆ ಎಂದು ಘೋಷಿಸುತ್ತೇನೆ.

ಈ ಆದೇಶವನ್ನು ದಿನಾಂಕ: 18.2.2005 ರಂದು ತೆರೆದ ಪ್ರಾಧಿಕಾರದಲ್ಲಿ ನೀಡಲಾಗಿದೆ. ಈ ಆದೇಶವನ್ನು ಹೊರಡಿಸಿದ 30 ದಿನಗಳ ಒಳಗಾಗಿ ಯಾವುದೇ ಅಹವಾಲು ಸ್ವೀಕೃತವಾಗದಿದ್ದಲ್ಲಿ ಈ ಆದೇಶವೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 419 ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

**KARNATAKA POWER TRANSMISSION CORPORATION LTD.**

**No. SEE/Tr. (W&M)/EE(o)/AEE/SSD/4578-81, dated: 22nd December 2004**

The Karnataka Power Transmission Corporation Ltd., have formulate a Scheme under 28(A) of the Electricity Supply Act 1948 and the same is herewith published in pursuance of Section 29(ii) of the said Act for information of the licence and any other persons Interested. Particulars of the Scheme are as follows:-

| | | |
|---|---|---|
| 1 | Name of the Scheme | Construction of 110 KV tap line from the existing down graded 110 KV V3 line to proposed 110/11 KV sub-station at Kammaradi Thirthahalli Tq. |
| 2 | Salient Features | To overcome low voltage condition and to meet growing power demand in the around Kammaradi village. |
| 3 | Areas passing through | Dasanagadde, Hagalamane, Kalmane, Kodlu, Boragurukoppa, Yashpal Santaragi Muttuvalli, Betageri, Kanagalgodu, Kadladi, Aramani Kammaradi. |
| 4 | Approximate cost | Rs.274.00 lakhs. |

The Corporation shall have and shall exercise all powers which the Telegraphs authorities possess under Part III of the Indian Telegraph Act 1985 (18 of 1985) for carrying out the above Scheme. Objections to the above Scheme if any should be sent to the Superintending Engineer, Elecl., Transmission (W&M) circle, KPTCL., Harnahalli Manjappa Complex, Park Extention, Shimoga within Two months from the date of publication of the Notification for consideration of the Corporation.

Superintending Engineer, Elecl.,
P.D. 15 Transmission (W&M) circle, KPTCL., Shimoga.

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ**

**ಅಧಿಸೂಚನೆ ಸಂಖ್ಯೆ: ಆನಾಸ 37 ಕಾಮಾಸೇ 2002, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2005**

ಕಾನೂನು ಮಾಪನಶಾಸ್ತ್ರ ಇಲಾಖೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32 ರಡಿ ಸ್ವತಂತ್ರ ಪ್ರಭಾರದ ಸಹಾಯಕ ನಿಯಂತ್ರಕರಾಗಿ ಕಾರ್ಯ ನಿರ್ವಹಿಸುತ್ತಿರುವ ಈ ಮುಂದೆ ಕಾಣಿಸಿದ ಅಧಿಕಾರಿಗಳಿಗೆ ವೇತನ ಶ್ರೇಣಿ ರೂ.5575-10620ರ ಸಹಾಯಕ ನಿಯಂತ್ರಕರ ಹುದ್ದೆಗೆ ದಿನಾಂಕ: 9.11.2004 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸ್ಥಾನಪನ್ನ ಮುಂಬಡ್ತಿ ನೀಡಿದೆ. ಸದರಿಯವರುಗಳನ್ನು ಪ್ರಸ್ತುತ ಕೆಲಸ ನಿರ್ವಹಿಸುತ್ತಿರುವ ಹುದ್ದೆ ಮತ್ತು ಸ್ಥಳಗಳಲ್ಲಿಯೇ ಮುಂದಿನ ಆದೇಶದವರೆಗೆ ಮುಂದುವರಿಸಿದೆ. ಈ ಮುಂಬಡ್ತಿ ಆದೇಶವು ಇಲಾಖೆಯ ಪ್ರಥಮ ದರ್ಜೆ ಸಹಾಯಕ ಹುದ್ದೆಯಿಂದ ಸಹಾಯಕ ನಿಯಂತ್ರಕರ ಹುದ್ದೆಗೆ ಮೀಸಲಿರಿಸಿರುವ ಬಿಂದುಗಳಿಗೆ ಮುಂಬಡ್ತಿ ನೀಡಿ ಸ್ಥಾನ ಹೊಂದಾಣಿಕೆ ಮಾಡುವ ಷರತ್ತಿಗೆ ಒಳಪಟ್ಟಿದೆ.

| ಕ್ರ.ಸಂ. | ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಹುದ್ದೆ / ಸ್ಥಳ |
|---|---|
| 1 | ಶ್ರೀ ಎಂ.ಎನ್. ಹಿಪ್ಪರಗಿ, ಸಹಾಯಕ ನಿಯಂತ್ರಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ. |
| 2. | ಶ್ರೀ ಎಲ್.ವಿ. ಶ್ರೀರಾಮ್, ಸಹಾಯಕ ನಿಯಂತ್ರಕರು, 4ನೇ ವೃತ್ತ, ಬೆಂಗಳೂರು. |
| 3. | ಶ್ರೀ ಕೆ.ಸಿ. ಮಂಜಪ್ಪ, ಸಹಾಯಕ ನಿಯಂತ್ರಕರು, ಸಂಚಾರಿದಳ-1, ಬೆಂಗಳೂರು. |
| 4. | ಶ್ರೀ ಎಂ.ಪಿ. ಗಣೇಶ್, ಸಹಾಯಕ ನಿಯಂತ್ರಕರು, ಮಂಗಳೂರು. |
| 5. | ಶ್ರೀ ಪಿ.ಸಿ. ಅರ್ಜುನಗಿ, ಸಹಾಯಕ ನಿಯಂತ್ರಕರು, ಬಿಜಾಪುರ. |
| 6. | ಶ್ರೀ ಮಹಮ್ಮದ್ ಅಬೀದ್ ಅಲಿ, ಸಹಾಯಕ ನಿಯಂತ್ರಕರು, ಬೀದರ್. |

| ಕ್ರ.ಸಂ. | ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಹುದ್ದೆ / ಸ್ಥಳ |
|---|---|
| 7. | ಶ್ರೀ ಎ.ಎಂ. ಹಿರೇಮಠ್, ಸಹಾಯಕ ನಿಯಂತ್ರಕರು, ಹುಬ್ಬಳ್ಳಿ. |
| 8. | ಶ್ರೀ ಜಿ. ತಿಮ್ಮರಾಯಪ್ಪ, ಸಹಾಯಕ ನಿಯಂತ್ರಕರು, ಸಂಚಾರಿದಳ-2, ಬೆಂಗಳೂರು. |
| 9. | ಶ್ರೀ ಎನ್.ಬಿ. ಮಾರನಬಸರಿ, ಸಹಾಯಕ ನಿಯಂತ್ರಕರು, ಹಾಸನ ಜಿಲ್ಲೆ. |
| 10. | ಶ್ರೀ ಜೆ.ಎಸ್. ಬೇವೂರ, ಸಹಾಯಕ ನಿಯಂತ್ರಕರು, ಬೆಳಗಾಂ. |
| 11. | ಶ್ರೀ ಎ.ವಿ. ರೇವಣ್‌ಕರ್, ಸಹಾಯಕ ನಿಯಂತ್ರಕರು, ಕೊಪ್ಪಳ. |
| 12. | ಶ್ರೀ ಮಹಮ್ಮದ್ ಅನ್ವರ್, ಸಹಾಯಕ ನಿಯಂತ್ರಕರು, ತುಮಕೂರು. |
| 13. | ಶ್ರೀ ಕೆ.ಹೆಚ್. ನಾಗರಾಜ್, ಸಹಾಯಕ ನಿಯಂತ್ರಕರು, ಉಡುಪಿ. |
| 14. | ಶ್ರೀ ಎನ್.ಜಿ. ದ್ಯಾಮನಗೌಡ, ಸಹಾಯಕ ನಿಯಂತ್ರಕರು, 1ನೇ ವೃತ್ತ, ಬೆಂಗಳೂರು. |
| 15. | ಶ್ರೀ ಬಿ.ಸಿ. ಚೌಡಪ್ಪ, ಸಹಾಯಕ ನಿಯಂತ್ರಕರು, ಮಂಡ್ಯ. |
| 16. | ಶ್ರೀ ಎಸ್.ವೈ. ಮೆಣಸಿನಕಾಯಿ, ಸಹಾಯಕ ನಿಯಂತ್ರಕರು, ಗದಗ್. |
| 17. | ಶ್ರೀ ಇ.ಜಿ. ಪಾಟೀಲ್, ಸಹಾಯಕ ನಿಯಂತ್ರಕರು, ಬಳ್ಳಾರಿ. |
| 18. | ಶ್ರೀ ಎ.ಆರ್. ಘೋಡ್ಕೆ, ಸಹಾಯಕ ನಿಯಂತ್ರಕರು, ಗುಲ್ಬರ್ಗಾ. |
| 19. | ಶ್ರೀ ಕೆ.ಬಿ. ಕೃಷ್ಣಮೂರ್ತಿ, ಸಹಾಯಕ ನಿಯಂತ್ರಕರು, 3ನೇ ವೃತ್ತ, ಬೆಂಗಳೂರು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಜೇಂದ್ರ**

ಪಿ.ಆರ್. 420

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಶಿಕ್ಷಣ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಇಡಿ-107-ಡಿಸಿಇ-2001, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2005

ಕರ್ನಾಟಕ ನಾಗರೀಕ ಸೇವೆಗಳು (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ, ತುಂಬದೇ ಇರುವ ಸ್ಥಾನಗಳು) (ವಿಶೇಷ ನೇಮಕಾತಿ) ನಿಯಮಗಳು, 2001ನ್ನು ಓದಿಕೊಂಡಂತೆ, ಕರ್ನಾಟಕ ಲೋಕ ಸೇವಾ ಆಯೋಗದ ಮುಖಾಂತರ ಕರ್ನಾಟಕ ಶಿಕ್ಷಣ ಇಲಾಖಾ ಸೇವೆಗಳು (ಕಾಲೇಜು ಶಿಕ್ಷಣ ಇಲಾಖೆ) (ನೇಮಕಾತಿ) ತಿದ್ದುಪಡಿ ನಿಯಮಾವಳಿಗಳು, 2002ರ ನಿಯಮಗಳಡಿಯಲ್ಲಿ ಆಯ್ಕೆಯಾದ ಈ ಕೆಳಕಂಡ ಅಭ್ಯರ್ಥಿಗಳನ್ನು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ರೂ.8000-275-13,500ರ ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ಅವರುಗಳ ಹೆಸರಿನ ಮುಂದೆ ಸೂಚಿಸಲಾದ ಕಾಲೇಜಿನಲ್ಲಿ ಅರ್ಥಶಾಸ್ತ್ರ ವಿಷಯದ ಉಪನ್ಯಾಸಕರಾಗಿ 02 (ಎರಡು) ವರ್ಷ ಅವಧಿಯ ಪರಿವೀಕ್ಷಣೆಯ ಮೇರೆಗೆ ಕೂಡಲೇ ಜಾರಿಗೆ ಬರುವಂತೆ ನೇಮಕಾತಿ ಮಾಡಲಾಗಿದೆ.

ವಿಷಯ: ಅರ್ಥಶಾಸ್ತ್ರ

| ಕ್ರ.ಸಂ. | ಹೆಸರು ಮತ್ತು ವಿಳಾಸ | ನೇಮಕಾತಿ ಮಾಡಲಾದ ಕಾಲೇಜು |
|---|---|---|
| 1 | ಶ್ರೀ ಬಲಿರಾಮ್,<br>ನಾರಾಯಣ್‌ಪುರ್ ಪೋಸ್ಟ್, ಬಸವಕಲ್ಯಾಣ ತಾಲ್ಲೂಕ್,<br>ಬೀದರ್ ಜಿಲ್ಲೆ - 585 348. | ಸರ್ಕಾರಿ ಪ್ರಥಮ ದರ್ಜೆ ಕಾಲೇಜು,<br>ಹೆಚ್.ಡಿ. ಕೋಟೆ. |

1) ಇವರ ನೇಮಕಾತಿಯು ತಾತ್ಕಾಲಿಕವಾಗಿದ್ದು, ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ : ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
2) ಇವರುಗಳ ನೇಮಕಾತಿಯು, ಮಹಿಳಾ ಮೀಸಲಾತಿ ಕುರಿತಂತೆ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ (ಸಿವಿಲ್) ಸಂಖ್ಯೆ:232/99ರ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.
3) ಇವರನ್ನು ಕೆಲಸಕ್ಕೆ ತೆಗೆದುಕೊಳ್ಳುವ ಮುನ್ನ ಅವರ ವಯಸ್ಸು, ವಿದ್ಯಾರ್ಹತೆಯ ಬಗ್ಗೆ ಮೂಲ ದಾಖಲೆಗಳೊಂದಿಗೆ ತಾಳೆ ನೋಡಿ ಪ್ರಸ್ತುತ ನೇಮಕಾತಿ ನಿಯಮಾನುಸಾರ ವಯೋಮಿತಿಯೊಳಗಿದ್ದಾರೆಯೇ ಹಾಗೂ ವಿದ್ಯಾರ್ಹತೆ ಹೊಂದಿರುವ ಬಗ್ಗೆ ಖಚಿತ ಪಡಿಸಿಕೊಳ್ಳತಕ್ಕದ್ದು.
4) ಇವರು ಪರಿವೀಕ್ಷಣಾ ಅವಧಿಯಲ್ಲಿ 1974ರ ಕರ್ನಾಟಕ ಸೇವಾ (ಸೇವಾ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಕನ್ನಡ ಭಾಷಾ ಮತ್ತು ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕೆಂಬ ಷರತ್ತನ್ನು ವಿಧಿಸಲಾಗಿದೆ ಹಾಗೂ ಪರೀಕ್ಷಾರ್ಥ ಅವಧಿಯಲ್ಲಿ ಯು.ಜಿ.ಸಿ. ಮಾರ್ಗಸೂಚಿಗಳನ್ವಯ ಅಲ್ಪಾವಧಿ ಓರಿಯೆಂಟೇಷನ್ / ರೆಫ್ರೆಷರ್ ಕೋರ್ಸ್‌ನಲ್ಲಿ ತರಬೇತಿ ಹೊಂದಿರತಕ್ಕದ್ದು ಮತ್ತು ಕರ್ತವ್ಯ ನಿರ್ವಹಣಾ ವರದಿಯು ತೃಪ್ತಿಕರವಿರತಕ್ಕದ್ದು.
5) ಇವರ ಸೇವಾ ಜ್ಯೇಷ್ಠತೆಯು ಪ್ರಸ್ತುತ ಕರ್ನಾಟಕ ಲೋಕಸೇವಾ ಆಯೋಗವು ಆಯಾಯ ವಿಷಯದಲ್ಲಿ ನಿರ್ಧರಿಸಿದಂತೆ ಇರತಕ್ಕದ್ದು. ಮುಂದೆ ಕರ್ನಾಟಕ ಲೋಕ ಸೇವಾ ಆಯೋಗವು ಕ್ರೋಢೀಕೃತ ಜ್ಯೇಷ್ಠತಾ ಪಟ್ಟಿಯನ್ನು ಸಿದ್ದಪಡಿಸಿದಂತೆ ಹಾಗೂ ಸರ್ಕಾರದಿಂದ ಪುನಃ ಹೊರಡಿಸುವ ಅಧಿಸೂಚನೆಯಲ್ಲಿರುವಂತೆ ಪಾಲಿಸತಕ್ಕದ್ದು.
6) ಇವರು ನೇಮಕಾತಿ ಆದೇಶವನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಿದ ದಿನಾಂಕದಿಂದ 15 (ಹದಿನೈದು) ದಿನಗಳೊಳಗೆ ಕೆಲಸಕ್ಕೆ ಸೇರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 421

**ಮೇರಿ ಜಾಯ್ಸ್**

ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

**PROCEEDINGS OF THE REGISTRAR OF CO-OPERATIVE SOCIETIES IN KARNATAKA, BANGALORE**

**No.LDB-2/147/DEB/2004-05, Dated: 15th February 2005**

**Sub:** Floatation of Special Development Debentures by the KSCA&RD Bank under various schemes for Rs.4,03,84,400/- issue of orders-reg.

**Ref:** (1) Proposal No.FS/DEB/448/2004-05 Dated: 9.2.2005 of the KSCA&RD Bank Ltd., Bangalore addressed to NABARD, Bangalore forwarding the proposal for Floatation of Special Development Debentures for Rs.4,03,84,400/- for their approval.

(2) Letter No: NB(BL)/ICD/7818/LDB-12/2004-05 Dated: 11.2.2005 of the NABARD, Bangalore addressed to the Managing Director, KSCA&RD Bank, under copy to the Registrar of Co-operative Societies in Karnataka, Bangalore conveying their approval to the proposal cited above at 1, for Rs.4,03,84,400/-

(3) Government O.M.No. FD 95. RLG; 68 dated: 11.11.1971.

(4) Letter No. CMW: 192: CLS 1998, Bangalore Dated: 16.6.1999 sanctioning the Government Guarantee, for Rs.1442.00 crores on behalf of the KSCA&RD Bank for the years 1999-2000 to 2001-02.

(5) Govt., letter No. FD 51 INV 2003 dated: 24.5.2004 and letter even No. Dated: 7.6.2004 extending the period of the guarantee up to 31.3.2005 for Rs.1325 crores.

(6) Proposal No. FS/DEB/452/2004-05 dated: 11.2.2005 of the KSCA&RD Bank, addressed to this office requesting to issue of orders for the floatation of the debentures approved by the NABARD as cited in Ref.2 above.

**PREAMBLE:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for floatation of Special Development Debentures under Various schemes for Rs.4,03,84,400/- and has requested them for their approval. On considering the proposal of the KARNATAKA STATE CO-OPERATIVE AGRICULTURE AND RURAL DEVELOPMENT BANK cited above at (1) the National Bank for Agriculture and Rural Development, Bangalore in their letter cited above at (2) has conveyed their approval for the floatation and agreed to subscribe to Special Development Debentures floated by the bank to the extent of Rs.4,03,84,400/- fully. Government in its O.M. cited above at (3) has prescribed the terms and conditions to be imposed by Government while guaranteeing the debentures to be floated by any institution. In the Government guarantee on behalf of the Karnataka State Co-operative Agriculture and Rural Development Bank for the years 1999-2000 to 2001-2002, Government has authorised the Registrar of Co-operative Societies to issue order etc., up to Rs.10.00 crore on each occasion, and to make the contribution to the debentures according to the pattern approved by the NABARD. The Govt. has further extended the period of said guarantee up to 31.3.2005 vide Government letter cited (5) above. All the relevant terms and conditions applicable to the Karnataka State Co-operative Agriculture and Rural Development Bank as per references cited above at (3) to (5) are to be followed. The Karnataka State Co-operative Agriculture and Rural Development Bank, in its letter cited at (6) has requested this office for issue of order for floatation of debentures as approved by the National Bank for Agriculture and Rural Development vide reference cited above at (2).

**ORDER**

1) Registrar of Co-operative Societies in Karnataka, Bangalore, hereby permits the Karnataka State Co-operative Agriculture and Rural Development Bank Ltd., Bangalore to float Special Development Debentures to the extent of Rs.4,03,84,400/- (Rupees Four Crores Three Lakhs Eightyfour Thousand Four Hundred Only) limiting the amount of debentures to the value of accumulated un-encumbered mortgages secured for implementing the National Bank for Agriculture and Rural Development Scheme, as per the details indicated hereunder, subject to the terms and conditions stipulated in the **ANNEXURE-1** to this order.

P.R. 422 Registrar of Co-operative Societies in Karnataka, Bangalore.

**PROCEEDINGS OF THE REGISTRAR OF CO-OPERATIVE SOCIETIES IN KARNATAKA, BANGALORE**

**No.LDB-2/146/DEB/2004-05, Dated: 15th February 2005**

**Sub:** Floatation of Special Development Debentures by the KSCA&RD Bank under various schemes for Rs.9,07,35,100/- issue of orders-reg.

**Ref:** (1) Proposal No.FS/DEB/448/2004-05 Dated: 9.2.2005 of the KSCA&RD Bank Ltd., Bangalore addressed to NABARD, Bangalore forwarding the proposal for Floatation of Special Development Debentures for Rs.9,07,35,100/- for their approval.

(2) Letter No: NB(BL)/ICD/7818/LDB-12/2004-05 Dated: 11.2.2005 of the NABARD, Bangalore addressed to the Managing Director, KSCA&RD Bank, under copy to the Registrar of Co-operative Societies in Karnataka, Bangalore conveying their approval to the proposal cited above at 1, for Rs.9,07,35,100/-

(3) Government O.M.No. FD 95. RLG; 68 dated: 11.11.1971.

(4) Letter No. CMW: 192: CLS 1998, Bangalore Dated: 16.6.1999 sanctioning the Government Guarantee, for Rs.1442.00 crores on behalf of the KSCA&RD Bank for the years 1999-2000 to 2001-02.

(5) Govt., letter No. FD 51 INV 2003 dated: 24.5.2004 and letter even No. Dated: 7.6.2004 extending the period of the guarantee up to 31.3.2005 for Rs.1325 crores.

(6) Proposal No. FS/DEB/451/2004-05 dated: 11.2.2005 of the KSCA&RD Bank, addressed to this office requesting to issue of orders for the floatation of the debentures approved by the NABARD as cited in Ref.2 above.

**PREAMBLE:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for floatation of Special Development Debentures under Various schemes for Rs.9,07,35,100/- and has requested them for their approval. On considering the proposal of the KARNATAKA STATE CO-OPERATIVE AGRICULTURE AND RURAL DEVELOPMENT BANK cited above at (1) the National Bank for Agriculture and Rural Development, Bangalore in their letter cited above at (2) has conveyed their approval for the floatation and agreed to subscribe to Special Development Debentures floated by the bank to the extent of Rs.8,28,06,100/-. The contribution from State Government and Central Government is to the extent of Rs.39,64,500/- each. Government in its O.M. cited above at (3) has prescribed the terms and conditions to be imposed by Government while guaranteeing the debentures to be floated by any institution. In the Government guarantee on behalf of the Karnataka State Co-operative Agriculture and Rural Development Bank for the years 1999-2000 to 2001-2002, Government has authorised the Registrar of Co-operative Societies to issue order etc., up to Rs.10.00 crore on each occasion, and to make the contribution to the debentures according to the pattern approved by the NABARD. The Govt. has further extended the period of said guarantee up to 31.3.2005 vide Government letter cited (5) above. All the relevant terms and conditions applicable to the Karnataka State Co-operative Agriculture and Rural Development Bank as per references cited above at (3) to (5) are to be followed. The Karnataka State Co-operative Agriculture and Rural Development Bank, in its letter cited at (6) has requested this office for issue of order for floatation of debentures as approved by the National Bank for Agriculture and Rural Development vide reference cited above at (2).

**ORDER**

1) Registrar of Co-operative Societies in Karnataka, Bangalore, hereby permits the Karnataka State Co-operative Agriculture and Rural Development Bank Ltd., Bangalore to float Special Development Debentures to the extent of Rs.9,07,35,100/- (Rupees Nine Crores Seven Lakhs Thirtyfive Thousand One Hundred Only) limiting the amount of debentures to the value of accumulated un-encumbered mortgages secured for implementing the National Bank for Agriculture and Rural Development Scheme, as per the details indicated hereunder, subject to the terms and conditions stipulated in the **ANNEXURE-1** to this order.

2) Sanction is hereby accorded to contribute a sum of Rs.39,64,500 (Rupees Thirtynine Lakhs Sixtyfour Thousand Five Hundred Only) being the State Government share of contribution to the various Special Development Debentures to be floated by the Karnataka State Co-operative

Agriculture and Rural Development Bank Ltd., Bangalore as approved by the National Bank for Agriculture and Rural Development vide their letter cited above at (2).

3) The currency for floating these debentures would be up to 31.3.2005.

4) General Manager and Manager of the Karnataka State Co-operative Agriculture and Rural Development Bank are authorised jointly to draw the amount on a payees receipt duly countersigned by the Additional Registrar of Co-operative Societies (ADM&DEV), Head Office, Bangalore.

The expenditure of Rs.39,64,500/- (Rupees Thirtynine Lakhs Sixtyfour Thousand Five Hundred Only) in this behalf towards Government contribution may be met under the budget Head "6416-Loans for Agricultural Financial Institutions-190 Loans to public sector and other undertakings-1 Karnataka State Co-operative Agriculture and Rural Development Bank-01 Loans for purchase of debentures." (6416-00-190-1-01).

P.R. 423 Registrar of Co-operative Societies in Karnataka, Bangalore.

**PROCEEDINGS OF THE REGISTRAR OF CO-OPERATIVE SOCIETIES IN KARNATAKA, BANGALORE**

**No.LDB-2/148/DEB/2004-05, Dated: 21st February 2005**

**Sub:** Floatation of Special Development Debentures by the KSCA&RD Bank under various schemes for Rs.9,97,93,900/- issue of orders-reg.

**Ref:** (1) Proposal No.FS/DEB/464/2004-05 Dated: 19.2.2005 of the KSCA&RD Bank Ltd., Bangalore addressed to NABARD, Bangalore forwarding the proposal for Floatation of Special Development Debentures for Rs.9,97,93,900/- for their approval.

(2) Letter No: NB(BL)/ICD/8003/LDB-12/2004-05 Dated: 21.2.2005 of the NABARD, Bangalore addressed to the Managing Director, KSCA&RD Bank, under copy to the Registrar of Co-operative Societies in Karnataka, Bangalore conveying their approval to the proposal cited above at 1, for Rs.9,97,93,900/-

(3) Government O.M.No. FD 95. RLG; 68 dated: 11.11.1971.

(4) Letter No. CMW: 192: CLS 1998, Bangalore Dated: 16.6.1999 sanctioning the Government Guarantee, for Rs.1442.00 crores on behalf of the KSCA&RD Bank for the years 1999-2000 to 2001-02.

(5) Govt., letter No. FD 51 INV 2003 dated: 24.5.2004 and letter even No. Dated: 7.6.2004 extending the period of the guarantee up to 31.3.2005 for Rs.1325 crores.

(6) Proposal No. FS/DEB/466/2004-05 dated: 21.2.2005 of the KSCA&RD Bank, addressed to this office requesting to issue of orders for the floatation of the debentures approved by the NABARD as cited in Ref.2 above.

**PREAMBLE:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for floatation of Special Development Debentures under Various schemes for Rs.9,97,93,900/- and has requested them for their approval. On considering the proposal of the KARNATAKA STATE CO-OPERATIVE AGRICULTURE AND RURAL DEVELOPMENT BANK cited above at (1) the National Bank for Agriculture and Rural Development, Bangalore in their letter cited above at (2) has conveyed their approval for the floatation and agreed to subscribe to Special Development Debentures floated by the bank to the extent of Rs.9,38,46,500/-. The contribution from State Government and Central Government is to the extent of Rs.29,73,700/- each. Government in its O.M. cited above at (3) has prescribed the terms and conditions to be imposed by Government while guaranteeing the debentures to be floated by any institution. In the Government guarantee on behalf of the Karnataka State Co-operative Agriculture and Rural Development Bank for the years 1999-2000 to 2001-2002, Government has authorised the Registrar of Co-operative Societies to issue order etc., up to Rs.10.00 crore on each occasion, and to make the contribution to the debentures according to the pattern approved by the NABARD. The Govt. has further extended the period of said guarantee up to 31.3.2005 vide Government letter cited (5) above. All the relevant terms and conditions applicable to the Karnataka State Co-operative Agriculture and Rural Development Bank as per references cited above at (3) to (5) are to be followed. The Karnataka State Co-operative Agriculture and Rural Development Bank, in its letter cited at (6) has requested this office for

issue of order for floatation of debentures as approved by the National Bank for Agriculture and Rural Development vide reference cited above at (2).

**ORDER**

1) Registrar of Co-operative Societies in Karnataka, Bangalore, hereby permits the Karnataka State Co-operative Agriculture and Rural Development Bank Ltd., Bangalore to float Special Development Debentures to the extent of Rs.9,97,93,900/- (Rupees Nine Crores Ninety seven Lakhs Ninetythree Thousand Nine Hundred Only) limiting the amount of debentures to the value of accumulated un-encumbered mortgages secured for implementing the National Bank for Agriculture and Rural Development Scheme, as per the details indicated hereunder, subject to the terms and conditions stipulated in the **ANNEXURE-1** to this order.
2) Sanction is hereby accorded to contribute a sum of Rs.29,73,700/- (Rupees Twentynine Lakhs Seventythree Thousand Seven Hundred Only) being the State Government share of contribution to the various Special Development Debentures to be floated by the Karnataka State Co-operative Agriculture and Rural Development Bank Ltd., Bangalore as approved by the National Bank for Agriculture and Rural Development vide their letter cited above at (2).
3) The currency for floating these debentures would be up to 31.3.2005.
4) General Manager and Manager of the Karnataka State Co-operative Agriculture and Rural Development Bank are authorised jointly to draw the amount on a payees receipt duly countersigned by the Additional Registrar of Co-operative Societies (ADM&DEV), Head Office, Bangalore.

The expenditure of Rs.29,73,700/- (Rupees Twentynine Lakhs Seventythree Thousand Seven Hundred Only) in this behalf towards Government contribution may be met under the budget Head "6416-Loans for Agricultural Financial Institutions-190 Loans to public sector and other undertakings-1 Karnataka State Co-operative Agriculture and Rural Development Bank-01 Loans for purchase of debentures." (6416-00-190-1-01).

P.R. 424 Registrar of Co-operative Societies in Karnataka, Bangalore.

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು**

**ಸಂಖ್ಯೆ: ಆಸಾನಿ 26 ಬೆಕಂಸೂ 2004, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ 2005**

**ಕರ್ನಾಟಕ ರಾಜ್ಯದ ಔದ್ಯಮಿಕ ಕಾರ್ಮಿಕರ ಗ್ರಾಹಕ ಬೆಲೆ ಸೂಚ್ಯಂಕಗಳ ವಾರ್ಷಿಕ ಸರಾಸರಿ**

| | |
|---|---|
| 2004ನೇ ವರ್ಷದ ಕರ್ನಾಟಕ ರಾಜ್ಯದ ಔದ್ಯಮಿಕ ಕಾರ್ಮಿಕರ ಗ್ರಾಹಕ ಬೆಲೆ ಸೂಚ್ಯಂಕಗಳ ವಾರ್ಷಿಕ ಸರಾಸರಿ (ಆಧಾರ ವರ್ಷ: 1987-88=100) | 318 |
| 1960ರ ಆಧಾರ ವರ್ಷಕ್ಕೆ ಪರಿವರ್ತಿತ ಸೂಚ್ಯಂಕ (ಪರಿವರ್ತನಾ ಅಪವರ್ತ್ಯ=8.5) | 2703 |

**ಟಿಪ್ಪಣಿ:** ಕರ್ನಾಟಕ ರಾಜ್ಯದ ಔದ್ಯಮಿಕ ಕಾರ್ಮಿಕರ ಗ್ರಾಹಕ ಬೆಲೆ ಸೂಚ್ಯಂಕಗಳ ವಾರ್ಷಿಕ ಸರಾಸರಿ 2004ನೇ ಕ್ಯಾಲೆಂಡರ್ ವರ್ಷಕ್ಕೆ ತೂಕದ ಸರಾಸರಿಯಾಗಿದ್ದು ಇದನ್ನು ರಾಜ್ಯದ 16 ಕೇಂದ್ರಗಳ ಮಾಸಿಕ ತೂಕದ ಸರಾಸರಿ ಸೂಚ್ಯಂಕದ ಆಧಾರದ ಮೇಲೆ ಲೆಕ್ಕ ಹಾಕಲಾಗಿದೆ.

**ಈ 16 ಕೇಂದ್ರಗಳು ಯಾವುದೆಂದರೆ:-**

**ಕೇಂದ್ರ ಸರಣಿ:** (1) ಬೆಂಗಳೂರು (2) ಬೆಳಗಾವಿ (3) ಹುಬ್ಬಳ್ಳಿ-ಧಾರವಾಡ (4) ಮಡಿಕೇರಿ

**ರಾಜ್ಯ ಸರಣಿ:** (5) ಬಳ್ಳಾರಿ (6) ಭದ್ರಾವತಿ (7) ದಾವಣಗೆರೆ (8) ದಾಂಡೇಲಿ (9) ಗುಲ್ಬರ್ಗ (10) ಹರಿಹರ (11) ಹಾಸನ (12) ಮಂಡ್ಯ (13) ಮಂಗಳೂರು (14) ಮೈಸೂರು (15) ರಾಯಚೂರು ಮತ್ತು (16) ತುಮಕೂರು.

ಜಂಟಿ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು.

**DIRECTORATE OF ECONOMICS & STATISTICS,**

**M.S. Building, Dr. B.R. Ambedkar Veedhi, Bangalore.**

**No. DES 26 PWX 2004, Bangalore, Dated: 14th February 2005**

**Karnataka State annual average Consumer Price Index for industrial workers**

| | |
|---|---|
| Karnataka State annual average Consumer Price Index for Industrial Workers for the year 2004 (Base year: 1987-88=100) | 318 |
| Index converted to 1960 base year (linking factor=8.5) | 2703 |

**Note:** Karnataka State annual average consumer price indiex is a weighted average for the calendar year 2004 computed on the basis of State monthly weighted average index of 16 Centres.

**The 16 Centres are:-**

**Central Series:** (1) Bangalore, (2) Belgaum, (3) Hubli-Dharwar, (4) Mercara.

**State Series:** (5) Bellary, (6) Bhadravathi, (7) Davanagere, (8) Dandeli, (9) Gulbarga, (10) Harihar, (11) Hassan, (12) Mandya, (13) Mangalore, (14) Mysore, (15) Raichur and (16) Tumkur.

Joint Director, Directorate of Economics and Statistics Bangalore.

P.R. 425

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಆಹಾರ ಮತ್ತು ನಾಗರೀಕ ಸರಬರಾಜು, ತುಮಕೂರು ಜಿಲ್ಲೆ, ತುಮಕೂರು**

**ಅಧಿಸೂಚನೆ ಸಂಖ್ಯೆ: ಎಫ್‌ಎಸ್‌ಡಿ:ಕೆಓ:ಸಿಆರ್:152:2004-05, ದಿನಾಂಕ: 9ನೇ ಫೆಬ್ರವರಿ 2005**

**ವಿಷಯ:** ತುಮಕೂರು ಜಿಲ್ಲೆಯಾದ್ಯಂತ ದಿನಾಂಕ: 10.02.2005 ರಿಂದ ಜಾರಿಗೆ ಬರುವಂತೆ ಗೃಹಬಳಕೆ ಶ್ರೇಷ್ಠಮಟ್ಟದ ಸೀಮೆಎಣ್ಣೆಯ ಸಗಟು ಹಾಗೂ ಚಿಲ್ಲರೆ ಮಾರಾಟದ ದರಗಳನ್ನು ಪುನರ್ ನಿಗದಿಪಡಿಸುವ ಬಗ್ಗೆ.

**ಉಲ್ಲೇಖ:** ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಎಫ್‌ಎಸ್:ಪಿಡಿ:III:59:2004-05, ದಿನಾಂಕ: 01.02.2005.

ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಇವರು ಉಲ್ಲೇಖದಲ್ಲಿ ನಮೂದಿಸಿರುವ ಪತ್ರದಲ್ಲಿ ಗೃಹಬಳಕೆಯ ಸೀಮೆಎಣ್ಣೆ ದರಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸಿದ್ದು, ಅದರನ್ವಯ ಸೀಮೆಎಣ್ಣೆ ಬೆಲೆಪಟ್ಟಿಯನ್ನು ಪುನರ್ ಪರಿಷ್ಕರಿಸಬೇಕಾಗಿದೆ. ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ರವರು ಸಾಗಾಣಿಕೆ ದರವನ್ನು ಈ ಕೆಳಕಂಡಂತೆ ಪರಿಷ್ಕರಿಸಿರುತ್ತಾರೆ.

| ಕ್ರ. ಸಂ. | ದೂರ | ಚಾಲ್ತಿಯಲ್ಲಿದ್ದ ಸಾಗಾಣಿಕೆ ದರ (ಪ್ರತಿ ಕೆಎಲ್‌ಗೆ) | ಪರಿಷ್ಕೃತ ಸಾಗಾಣಿಕೆ ದರ (ಪ್ರತಿ ಕೆಎಲ್‌ಗೆ) |
|---|---|---|---|
| 1 | 39 RTKM ದೂರದವರೆಗೆ | ರೂ.79.25 | ರೂ.99.00 |
| 2 | 40 RTKM ನಿಂದ 150 RTKM ನಡುವಿನ ದೂರದವರೆಗೆ | ರೂ.0.72 | ರೂ.1.04 |
| 3 | 150 RTKM ನಿಂದ ಹೆಚ್ಚಿನ ದೂರದವರೆಗೆ | ರೂ.0.68 | ರೂ.1.02 |

ಅಲ್ಲದೆ ಪ್ರಸ್ತುತ ಜಿಲ್ಲೆಗಳಲ್ಲಿ ಸೀಮೆಎಣ್ಣೆಯನ್ನು ಚಿಲ್ಲರೆ ಮಾರಾಟಗಾರರಿಗೆ ತಲುಪಿಸುವ ಡೋರ್ ಡೆಲಿವರಿ ಪದ್ಧತಿಯಲ್ಲಿ ಎಲ್ಲಾ ಜಿಲ್ಲೆಗಳಲ್ಲೂ ಡೋರ್ ಡೆಲಿವರಿ ದರವನ್ನು ಏಕರೂಪತೆಯನ್ನು ತರಲು ಪ್ರತಿ ಕೆಎಲ್‌ಗೆ ರೂ.300-00 ರಂತೆ ನಿಗದಿಪಡಿಸಿರುತ್ತಾರೆ.

ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ರವರು ಉಲ್ಲೇಖದ ಪತ್ರದಲ್ಲಿ ಈ ಪರಿಷ್ಕರಣೆಯು ಕೇವಲ ಸಾಗಾಣಿಕೆ ದರಗಳಿಗೆ ಮಾತ್ರ ಸೀಮಿತವಾಗಿದ್ದು, ಉಳಿದ ಎಲ್ಲಾ ಘಟಕ ದರಗಳು ಈ ಹಿಂದಿನಂತೆಯೇ ಇರುತ್ತದೆಂದು ಹಾಗೂ ದರಪಟ್ಟಿಯನ್ನು ಮಾಡುವಾಗ ಚಿಲ್ಲರೆ ದರವನ್ನು ಸಮೀಪದ ಹತ್ತು ಪೈಸೆಗೆ ನಿಗದಿಪಡಿಸಿ (ರೌಂಡ್ ಆಫ್) ಮಾಡುವಂತೆ ಹಾಗೂ ವ್ಯತ್ಯಾಸದರವನ್ನು ಸರ್ಕಾರದ ಲೆಕ್ಕ ಶೀರ್ಷಿಕೆಗೆ ಜಮಾ ಮಾಡುವಂತೆ ಆದೇಶ ನೀಡಿರುತ್ತಾರೆ. ಆಯುಕ್ತರು ನೀಡಿರುವ ಪತ್ರದಲ್ಲಿ ತಿಳಿಸಿರುವಂತೆ ಪರಿಷ್ಕರಿಸಿರುವ ಸಾಗಾಣಿಕೆ ದರವನ್ನು ಹಾಗೂ ಡೋರ್ ಡೆಲಿವರಿ ಸಾಗಾಣಿಕೆ ದರವನ್ನು ಗಮನಕ್ಕೆ ತೆಗೆದುಕೊಂಡು ಬೆಲೆ ಪಟ್ಟಿಯನ್ನು ಪರಿಷ್ಕರಿಸಲಾಗಿದೆ. ತುಮಕೂರು ಜಿಲ್ಲೆಯ ಎಲ್ಲಾ ಸಗಟುನಾಮಿನಿದಾರರು ಸಹ ಡೋರ್ ಡೆಲಿವರಿ ಮೂಲಕ ಸೀಮೆಎಣ್ಣೆಯನ್ನು ಚಿಲ್ಲರೆ ಮಾರಾಟಗಾರರಿಗೆ ಸಾಗಾಣಿಕೆ ಮಾಡುತ್ತಿದ್ದು, ಆಯುಕ್ತರ ಪತ್ರದಲ್ಲಿ ತೋರಿಸಿರುವಂತೆ ಡೋರ್ ಡೆಲಿವರಿ ದರವನ್ನು ನಿಗದಿಪಡಿಸಿ ಬೆಲೆಪಟ್ಟಿಯನ್ನು ಇದರೊಂದಿಗೆ ಲಗತ್ತಿಸಿದೆ.

ಜಿಲ್ಲೆಯಲ್ಲಿ ಹಿಂದೆ, ದಿನಾಂಕ: 01.08.2002 ರಿಂದ ಜಾರಿಗೆ ಬರುವಂತೆ ನಿಗದಿಪಡಿಸಲಾಗಿದ್ದ ಸೀಮೆಎಣ್ಣೆ ದರಪಟ್ಟಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ. ಸೀಮೆಎಣ್ಣೆ ಗರಿಷ್ಠ ಪರಿಮಿತಿ ಕಾಯ್ದೆ 1993ರ ಸೀಮೆಎಣ್ಣೆ ಪರಿಮಿತಿ ಬಳಕೆ ಹಾಗೂ ಗರಿಷ್ಠದರ ನಿಗದಿ ಕಾಯ್ದೆ 1993ರ ನಿಯಮ 2(ಡಿ)ರ ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ಎಂ.ಬಿ. ದ್ಯಾಬೇರಿ, ಭಾ.ಆ.ಸೇ., ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ದಿನಾಂಕ: 10.02.2005 ರಿಂದ ಜಾರಿಗೆ ಬರುವಂತೆ ತುಮಕೂರು ಜಿಲ್ಲೆಯಾದ್ಯಂತ ತಾಲ್ಲೂಕುವಾರು ಸೀಮೆಎಣ್ಣೆ ಸಗಟು ಹಾಗೂ ಚಿಲ್ಲರೆ ಮಾರಾಟದ ದರಗಳನ್ನು ಪರಿಷ್ಕರಿಸಿ ನಿಗದಿಪಡಿಸಿ ಆದೇಶಿಸಿದ್ದೇನೆ.

ಅಂಡರ್‌ಗ್ರೌಂಡ್‌ಸ್ಟೋರೇಜ್ ಟ್ಯಾಂಕರ್ ಹೊಂದಿಲ್ಲದೆ ಇರುವ ಸಗಟು ವಿತರಕರು ಪ್ರತಿ ಕೆಎಲ್ 1ಕ್ಕೆ ರೂ.43-25 ಗಳನ್ನು ಸಂಬಂಧಪಟ್ಟ ತೈಲ ಕಂಪನಿಗಳಿಗೆ ಜಮಾ ಮಾಡಲು ಸೂಚಿಸಿದೆ, ಹಾಗೂ ಚಿಲ್ಲರೆ ಸೀಮೆಎಣ್ಣೆ ದರಗಳನ್ನು ನಿಗದಿಪಡಿಸಿದಾಗ ಸಮೀಪದ ದಶಪೂರ್ಣ ಅಂಕಿಗೆ ದರ ನಿಗದಿಪಡಿಸಲಾಗಿದ್ದು, ವ್ಯತ್ಯಾಸದ ಮೊಬಲಗನ್ನು ಎಲ್ಲಾ ಸಗಟು ವಿತರಕರು ಪ್ರತಿ ಆಯಾ ಮಾಹೆಯ ಕೊನೆಯ ದಿನಾಂಕದಂದು ಸರ್ಕಾರದ ಲೆಕ್ಕ ಜಮಾ ಶೀರ್ಷಿಕೆ 0408-00-101-1-02ಕ್ಕೆ ಜಮಾ ಮಾಡಿ ಮೂಲ ಚಲನ್ ಪ್ರತಿಯನ್ನು ಈ ಕಛೇರಿಗೆ ಹಾಜರುಪಡಿಸಿ, ಈ ಕಛೇರಿಯಿಂದ ಅನುಮತಿ ಪತ್ರವನ್ನು ಪಡೆದ ನಂತರ ಮುಂದಿನ ಮಾಹೆಯ ಸೀಮೆಎಣ್ಣೆಯನ್ನು ಎತ್ತುವಳಿ ಮಾಡತಕ್ಕದ್ದು. ಮಂಗಳೂರಿನಿಂದ ಸೀಮೆಎಣ್ಣೆ ಎತ್ತುವಳಿ ಮಾಡುವ ಸಗಟುವಿತರಕರಿಗೆ ತಿಪಟೂರು, ತುರುವೇಕೆರೆ ಹಾಗೂ ಚಿ.ನಾ.ಹಳ್ಳಿ ತಾಲ್ಲೂಕುಗಳಲ್ಲಿ ಮಾತ್ರ ಸೀಮೆಎಣ್ಣೆ ವಿತರಣೆಗೆ ವ್ಯವಸ್ಥೆ ಮಾಡಲು ಸೂಚಿಸಿದೆ. ಅನಿವಾರ್ಯ ಸಂಧರ್ಭಗಳಲ್ಲಿ ದೇವನಗುಂದಿ ವಿತರಣಾ ಕೇಂದ್ರದಿಂದ ಎತ್ತುವಳಿ ಮಾಡುವ ವಿತರಕರಿಗೆ ಮೇಲ್ಕಂಡ ತಾಲ್ಲೂಕುಗಳಿಗೆ ಹಂಚಿಕೆ ನೀಡಿದಲ್ಲಿ ಪ್ರತ್ಯೇಕ ಬೆಲೆ ಪಟ್ಟಿಯನ್ನು ನೀಡಲಾಗುವುದು.

ಯಾವುದೇ ರೀತಿಯ ದೂರುಗಳಿಗೆ ಅವಕಾಶ ನೀಡದಂತೆ ದರವನ್ನು ನಿಗದಿಪಡಿಸಿ, ಆದೇಶಿಸಿರುವ ಪ್ರಕಾರ ಸೀಮೆಎಣ್ಣೆ ಹಂಚಿಕೆಯನ್ನು ಮಾಡಲು ಸಗಟು ಹಾಗೂ ಚಿಲ್ಲರೆ ವಿತರಕರಿಗೆ ಆದೇಶಿಸಿದೆ. ನ್ಯೂನತೆಗಳನ್ನು ಗಂಭೀರವಾಗಿ ಪರಿಗಣಿಸಿ ಅಗತ್ಯವಸ್ತುಗಳ ಕಾಯ್ದೆಯಡಿ ಕ್ರಮ ತೆಗೆದುಕೊಳ್ಳಲಾಗುವುದು.

ಜಿಲ್ಲಾಧಿಕಾರಿಗಳ ಪರವಾಗಿ,
ಆಹಾರ ಮತ್ತು ನಾಗರೀಕ ಸರಬರಾಜು, ತುಮಕೂರು ಜಿಲ್ಲೆ, ತುಮಕೂರು.

ಬೆಂಗಳೂರು (ದೇವನಗೊಂದಿ) ಸೀಮೆಎಣ್ಣೆ ವಿತರಣಾ ಕೇಂದ್ರದಿಂದ ಎತ್ತುವಳಿ ಮಾಡುವ ಸಗಟುನಾಮಿನಿದಾರರಿಗೆ ಸಂಬಂಧಿಸಿದಂತೆ

| ಕ್ರ. ಸಂ. | ತಾಲ್ಲೂಕಿನ ಹೆಸರು | ಸಗಟು ಮಾರಾಟದರ (1 ಕೆ.ಎಲ್.ಗೆ) ರೂ.ಗಳಲ್ಲಿ | ಚಿಲ್ಲರೆ ಮಾರಾಟದರ (1 ಲೀ.ಗೆ) ರೂ.ಗಳಲ್ಲಿ | ಪಾವತಿ ಮಾಡಬೇಕಾದ ವ್ಯತ್ಯಾಸ ದರ |
|---|---|---|---|---|
| 1 | ತುಮಕೂರು ಗ್ರಾ. | 9400 | 9.70 | 13.96 |
| 2 | ಕುಣಿಗಲ್ | 9400 | 9.70 | 13.96 |
| 3 | ಗುಬ್ಬಿ | 9500 | 9.80 | 71.12 |
| 4 | ತಿಪಟೂರು | 9600 | 9.90 | 63.00 |
| 5 | ತುರುವೇಕೆರೆ | 9600 | 9.90 | 83.40 |
| 6 | ಚಿ.ನಾ. ಹಳ್ಳಿ | 9600 | 9.90 | 87.48 |
| 7 | ಮಧುಗಿರಿ | 9500 | 9.80 | 26.24 |
| 8 | ಕೊರಟಗೆರೆ | 9500 | 9.80 | 62.96 |
| 9 | ಸಿರಾ | 9500 | 9.80 | 5.84 |
| 10 | ಪಾವಗಡ | 9600 | 9.90 | 20.16 |
| 11 | ತುಮಕೂರು ನಗರ | 9100 | 9.40 | 13.96 |

ಮಂಗಳೂರು ಸೀಮೆಎಣ್ಣೆ ವಿತರಣಾ ಕೇಂದ್ರದಿಂದ ಎತ್ತುವಳಿ ಮಾಡುವ ಸಗಟು ನಾಮಿನಿದಾರರಿಗೆ ಸಂಬಂಧಿಸಿದಂತೆ

| ಕ್ರ. ಸಂ. | ತಾಲ್ಲೂಕಿನ ಹೆಸರು | ಸಗಟು ಮಾರಾಟದರ (1 ಕೆ.ಎಲ್.ಗೆ) ರೂ.ಗಳಲ್ಲಿ | ಚಿಲ್ಲರೆ ಮಾರಾಟದರ (1 ಲೀ.ಗೆ) ರೂ.ಗಳಲ್ಲಿ | ಪಾವತಿ ಮಾಡಬೇಕಾದ ವ್ಯತ್ಯಾಸ ದರ |
|---|---|---|---|---|
| 1 | ತುಮಕೂರು ಗ್ರಾ. | 9700 | 10.00 | 70.00 |
| 2 | ಕುಣಿಗಲ್ | 9700 | 10.00 | 59.80 |
| 3 | ಗುಬ್ಬಿ | 9600 | 9.90 | 10.80 |
| 4 | ತಿಪಟೂರು | 9500 | 9.80 | 23.00 |
| 5 | ತುರುವೇಕೆರೆ | 9600 | 9.90 | 72.00 |
| 6 | ಚಿ.ನಾ. ಹಳ್ಳಿ | 9600 | 9.90 | 74.04 |
| 7 | ಮಧುಗಿರಿ | 9800 | 10.10 | 84.32 |
| 8 | ಕೊರಟಗೆರೆ | 9700 | 10.00 | 16.96 |
| 9 | ಸಿರಾ | 9700 | 10.00 | 0.64 |
| 10 | ಪಾವಗಡ | 9900 | 10.20 | 74.16 |
| 11 | ತುಮಕೂರು ನಗರ | 9400 | 9.70 | 70.00 |

ಜಿಲ್ಲಾಧಿಕಾರಿಗಳ ಪರವಾಗಿ,

ಪಿ.ಆರ್. 426 ಆಹಾರ ಮತ್ತು ನಾಗರೀಕ ಸರಬರಾಜು, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಯನಿರ್ವಾಹಕ ಅಭಿಯಂತರರವರ ಕಛೇರಿ, ಲೋಕೋಪಯೋಗಿ ಇಲಾಖೆ, ರಾಯಚೂರು ವಿಭಾಗ, ರಾಯಚೂರು.**

**ಅಂತಿಮ ನೋಟೀಸ್**

**ಕ್ರಮ ಸಂಖ್ಯೆ: ಲೋಇ:ರಾವಿ:ಸಿ.3:ವಚಾ:ಕ್ರಸಿ:ಚಾಲಕ:ವಿವ:52:2004-05:3365, ದಿನಾಂಕ: 19ನೇ ಫೆಬ್ರವರಿ 2005**

**ವಿಷಯ:** ಶ್ರೀ ಸೈಯದ್ ಖಾದರ್‌ಪಾಶ, ವಾಹನ ಚಾಲಕರು, ಲೋ. ಇಲಾಖೆ, ಉಪವಿಭಾಗ, ರಾಯಚೂರು ಇವರು ದಿನಾಂಕ: 1.11.2003 ರಿಂದ ಪ್ರಸ್ತುತ ಅವಧಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿರುವ ಬಗ್ಗೆ.

**ಉಲ್ಲೇಖ:**
1) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು ಲೋ.ಇಲಾಖೆ ಉಪವಿಭಾಗ, ರಾಯಚೂರು ಇವರ ಪತ್ರ ಸಂಖ್ಯೆ: ಸಿ.1:ಚಾಲಕ:ಹಾಪ:2003-04:972-74, ದಿನಾಂಕ: 7.2.2004:1005-07, ದಿನಾಂಕ: 23.2.2004.
2) - ಸದರ - ದೇವದುರ್ಗ ಇವರ ಪತ್ರ ಸಂಖ್ಯೆ: ಲೋಇ:ದೆಉವಿ:ವಾಹನ: ಸಕ್ರನಿಕಲ:2003-04:307-08, ದಿನಾಂಕ: 8.3.2004.
3) ಈ ಕಛೇರಿಯ ಪತ್ರ ಸಮಸಂಖ್ಯೆ: 3767, ದಿನಾಂಕ: 31.3.2004.
4) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು ಲೋ. ಇಲಾಖೆ, ಉಪವಿಭಾಗ, ರಾಯಚೂರು ಇವರ ಪತ್ರ ಸಂಖ್ಯೆ: ಸಿ.1:ಚಾಲಕ:ಕ.ಗೈ:2003-04:11-13, ದಿನಾಂಕ: 5.4.2004.
5) - ಸದರ - 62-63, ದಿನಾಂಕ: 4.5.2004.
6) - ಸದರ - 194-96, ದಿನಾಂಕ: 22.6.2004.
7) ಈ ಕಛೇರಿಯ ಸಮಸಂಖ್ಯೆ ಪತ್ರ ಸಂಖ್ಯೆ: 761, ದಿನಾಂಕ: 30.4.2004.
8) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು, ಲೋ. ಇಲಾಖೆ ಉಪವಿಭಾಗ, ರಾಯಚೂರು ಇವರ ಪತ್ರ ಸಂಖ್ಯೆ: ಸಿ.1:ಚಾಲಕ:ಅಗೈ:2004-05:382-84, ದಿನಾಂಕ: 7.6.2004.
9) - ಸದರ - 660-62, ದಿನಾಂಕ: 26.10.2004.
10) ಈ ಕಛೇರಿ ಪತ್ರ ಸಂಖ್ಯೆ: ಲೋಇ:ರಾವಿ:ಸಿ.3:ವಚಾ:ಕ್ರಸಿ:ಚಾಲಕ:04-05:2500, ದಿನಾಂಕ: 1.12.2004.

11) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಲೋ.ಇಲಾಖೆ ಉಪವಿಭಾಗ, ರಾಯಚೂರು ಇವರ ಪತ್ರ ಸಂಖ್ಯೆ: ಸಿ.1:ಚಾಲಕ:ಅಗೈ:ಸಕ್ರಮ:2004-05:838-40, ದಿನಾಂಕ: 14.12.2004.
12) - ಸದರ - ನಂ.841-43, ದಿನಾಂಕ: 14.12.2004.
13) - ಸದರ - ನಂ.1003-05, ದಿನಾಂಕ: 10.1.2005.
14) - ಸದರ - ನಂ.1000-02, ದಿನಾಂಕ: 10.1.2005.
15) - ಸದರ - ನಂ.1072- ದಿನಾಂಕ: 5.2.2005.

ಶ್ರೀ ಸೈಯದ್ ಖಾದರ್‌ಪಾಶ, ವಾಹನ ಚಾಲಕರು, ಲೋಕೋಪಯೋಗಿ ಇಲಾಖೆ ಉಪವಿಭಾಗ, ರಾಯಚೂರು ತಾಲ್ಲೂಕು, ಜಿಲ್ಲೆ ರಾಯಚೂರು, ಆದ ನೀವು ದಿನಾಂಕ: 1.11.2003 ರಿಂದ 23.8.2004ರ ವರೆಗೆ ಹಾಗೂ ದಿನಾಂಕ: 1.10.2004 ರಿಂದ ಪ್ರಸ್ತುತ ಅವಧಿಯವರೆಗೆ ಸರಕಾರಿ ಸೇವೆಯಲ್ಲಿ ಅನಧಿಕೃತ ಗೈರು ಹಾಜರಿದ್ದು, ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು, ಲೋ.ಇಲಾಖೆ, ಉಪವಿಭಾಗ, ರಾಯಚೂರು ಇವರು ಹಾಗೂ ಈ ಕಾರ್ಯಾಲಯದಿಂದ ಉಲ್ಲೇಖ (3) (6) (7) (8) (11) (14) ಮತ್ತು (15) ಗಳಲ್ಲಿ ನಿಮಗೆ ಹಲವು ಸಲ ಜ್ಞಾಪನಾ ಪತ್ರಗಳನ್ನು ನೀಡಲಾಗಿರುತ್ತದೆ. ಉಲ್ಲೇಖ (9)ರ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರ ಪತ್ರದಲ್ಲಿ ನೀವು ವೈದ್ಯಕೀಯ ರಜೆಯ ಮೇಲಿದ್ದು ದಿನಾಂಕ: 24.8.2004 ರಂದು ಕರ್ತವ್ಯಕ್ಕೆ ಹಾಜರಾಗಿದ್ದ ಬಗ್ಗೆ ಈ ಕಾರ್ಯಾಲಯಕ್ಕೆ ವರದಿಯನ್ನು ಸಲ್ಲಿಸಿ ನಿಮ್ಮ ದೀರ್ಘಾವಧಿ ರಜೆಯ ಬಗ್ಗೆ ಕೈಗೊಳ್ಳಬೇಕಾದ ಕ್ರಮದ ಬಗ್ಗೆ ಮಾರ್ಗದರ್ಶನವನ್ನು ಕೇಳಿದ್ದರನ್ವಯ ಉಲ್ಲೇಖ (10)ರ ಪತ್ರದಲ್ಲಿ ವೈದ್ಯಕೀಯ ರಜೆ ಮಂಜೂರು ಮಾಡುವ ವಿಧಾನದ ಬಗ್ಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರಿಗೆ ತಿಳಿಸಲಾಗಿತ್ತು. ಆದರನ್ವಯ ಉಲ್ಲೇಖ (11)ರ ಪತ್ರದಲ್ಲಿ ನಿಮಗೆ ಸೂಕ್ತ ಮಾರ್ಗದರ್ಶನವನ್ನು ನೀಡಲಾಗಿ ಸಮಂಜಸವಾದ ವಿವರಣೆ ಹಾಗೂ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸಲು ಸೂಚಿಸಲಾಗಿರುತ್ತದೆ. ಉಲ್ಲೇಖ (12)ರ ಪತ್ರದಲ್ಲಿ ನೀವು ದಿನಾಂಕ: 26.9.2004 ರಿಂದ ಪುನಃ ಅನಧಿಕೃತ ಗೈರು ಹಾಜರಿ ಆಗಿರುವ ಬಗ್ಗೆ ವರದಿಯು ಈ ಕಛೇರಿಗೆ ಬಂದಿದ್ದು, ಉಲ್ಲೇಖ (13) ಮತ್ತು (14)ರ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರ ಪತ್ರದಲ್ಲಿ ನಿಮಗೆ ಶೋಕಾಸ್ ನೋಟೀಸನ್ನು ನೀಡಿ ನಿಮ್ಮ ವರ್ತನೆ ಬಗ್ಗೆ ಎಚ್ಚರಿಕೆಯನ್ನು ನೀಡಲಾಗಿದೆ.

ಮೇಲೆ ವಿವರಿಸಲಾದಂತೆ, ಜಿಲ್ಲಾ ವೈದ್ಯಕೀಯ ಮಂಡಳಿಯಿಂದ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸಲು ಉಲ್ಲೇಖ (14) ರಲ್ಲಿ ನಿಮಗೆ ತಿಳಿಸಿದ್ದಾಗ್ಯೂ ನಿಮ್ಮಿಂದ ಯಾವುದೇ ಉತ್ತರವಿಲ್ಲ. ಕಾರಣ ಈ "ಅಂತಿಮ ನೋಟೀಸು", "ಕರ್ನಾಟಕ ರಾಜ್ಯಪತ್ರ" ದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿನಗಳ ಒಳಗಾಗಿ ಸೂಕ್ತ ಕಾರಣದೊಂದಿಗೆ ಮತ್ತು ಸೂಕ್ತ ದಾಖಲೆ ಸಹಿತ ಈ ಕಛೇರಿಗೆ ಹಾಜರ್ ಆಗಿ ಅನುಮತಿ ಪಡೆದು ಸೇವೆಗೆ ಹಾಜರಾಗಬಹುದೆಂದು ತಿಳಿಸಲಾಗಿದೆ.

ಒಂದು ವೇಳೆ ಈ ಅವಧಿಯ ಒಳಗಾಗಿ ಸೇವೆಗೆ ಹಾಜರಾಗದಿದ್ದರೆ ಯಾವುದೇ ಮುನ್ಸೂಚನೆ ಇಲ್ಲದೆ ಈ "ಅಂತಿಮ ನೋಟೀಸ್" ಆಧಾರದನ್ವಯ 1957ರ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು) ನಿಯಮಗಳು (8)ನೆಯ ನಿಬಂಧ (vi)ರ ಪ್ರಕಾರ ನಿಮ್ಮನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗುವುದು.

**ಜಿ. ತಿಪ್ಪೇಸ್ವಾಮಿ**
ಶಿಸ್ತುಪ್ರಾಧಿಕಾರಿಗಳು ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು,
ಲೋಕೋಪಯೋಗಿ ಇಲಾಖೆ ವಿಭಾಗ, ರಾಯಚೂರು.

ಪಿ.ಆರ್. 427

## ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ನಿರ್ದೇಶನಾಲಯದ ನಡವಳಿಗಳು

**ವಿಷಯ:** ಶ್ರೀ ಮೀರ್ ಮನ್ಸೂರ್ ಆಲಿಖಾನ್, ದ್ವಿ.ದ.ಸ., ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇವರ ಮೇಲಿನ ಅನಧಿಕೃತ ಗೈರುಹಾಜರಿ ಮತ್ತು ಗ್ರಂಥಾಲಯದ ಪುಸ್ತಕಗಳ ದುರುಪಯೋಗದ ಆರೋಪಗಳ ಕುರಿತು ವಿಚಾರಣೆ ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ನಿರ್ದೇಶನಾಲಯದ ಆರೋಪ ಪಟ್ಟಿ ಒಳಗೊಂಡ ತಿಳುವಳಿಕೆ ಪತ್ರ ಸಂಖ್ಯೆ: ಭಾವೈಪ:65:ಸಿ(2):03-04, ದಿ: 1.9.04
2) ನಿರ್ದೇಶನಾಲಯದ ಪತ್ರ ಸಂಖ್ಯೆ: ಭಾವೈಪ:65:ಸಿ(2):03-04, ದಿ: 19.10.04 ರಲ್ಲಿ ಹೊರಡಿಸಿದ ಪ್ರಕಟಣೆ.
3) ನಿರ್ದೇಶನಾಲಯದ ಅ.ಜ್ಞಾ.ಸಂ: ಭಾವೈಪ:65:ಸಿಬ್ಬಂದಿ(2):03-04, ದಿನಾಂಕ: 29.11.2004.
4) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 2.2.2005.

**ಪ್ರಸ್ತಾವನೆ:**

ಶ್ರೀ ಮೀರ್ ಮನ್ಸೂರ್ ಆಲಿ ಖಾನ್, ದ್ವಿತೀಯ ದರ್ಜೆ ಸಹಾಯಕ, ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಇವರು ದಿನಾಂಕ: 1.1.2002 ರಿಂದ 12.4.2002 ರವರೆಗೆ ಮತ್ತು ದಿನಾಂಕ: 26.4.2002 ರಿಂದ ಇಲ್ಲಿಯವರೆಗೂ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದು ಮತ್ತು ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯದ ಗ್ರಂಥಾಲಯದ ಪ್ರಭಾರ ವಹಿಸಿಕೊಡುವಾಗ ರೂ.36,280.60 ಮೌಲ್ಯದ 355 ಪುಸ್ತಕಗಳ ಪ್ರಭಾರ ವಹಿಸಿಕೊಡದೆ ಸ್ವಂತಕ್ಕೆ ದುರುಪಯೋಗಪಡಿಸಿಕೊಂಡಿರುವ ಆರೋಪಗಳ ಕುರಿತಂತೆ ಉಲ್ಲೇಖ (1) ರಲ್ಲಿ ಆರೋಪ ಪಟ್ಟಿಯನ್ನೊಳಗೊಂಡ ತಿಳುವಳಿಕೆ ಪತ್ರವನ್ನು ಹೊರಡಿಸಿ ಆರೋಪಿ ಸರ್ಕಾರಿ ನೌಕರ ತಿಳಿಸಿದ ವಿಳಾಸಗಳಿಗೆ ನೋಂದಾಯಿತ ಅಂಚೆ ಮೂಲಕ ಕಳುಹಿಸಿದ್ದ ಪತ್ರಗಳು ಸ್ವೀಕೃತವಾಗದೇ ವಾಪಸ್ಸು ಬಂದಿದ್ದವು. ಈ ಆರೋಪಗಳ ಸತ್ಯಾಸತ್ಯತೆ ತಿಳಿಯಲು ವಿವರವಾದ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸಿ ವಿಚಾರಣಾಧಿಕಾರಿಗಳ ಮುಂದೆ ಹಾಜರಾಗಲು ಆರೋಪಿ ಸರ್ಕಾರಿ ನೌಕರನಿಗೆ ಸೂಚಿಸಿ ಉಲ್ಲೇಖ (2) ರಲ್ಲಿನ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಲಾಗಿತ್ತು. ಸದರಿ ಸೂಚನೆಯು ಪ್ರಜಾವಾಣಿ ಹಾಗೂ ಸಂಯುಕ್ತ ಕರ್ನಾಟಕ ದಿನಪತ್ರಿಕೆಗಳಲ್ಲಿ ದಿನಾಂಕ: 24.10.2004 ರಂದು ಪ್ರಕಟಗೊಂಡಾಗ್ಯೂ ಸದರಿ ಸೂಚನೆಯಂತೆ ಆರೋಪಿ ಸರ್ಕಾರಿ ನೌಕರನು ವಿಚಾರಣಾಧಿಕಾರಿಗಳ ಮುಂದೆ ಹಾಜರಾಗಿರುವುದಿಲ್ಲ. ಪ್ರಕರಣವನ್ನು exparte ಎಂದು ಪರಿಗಣಿಸಿ ಏಕಪಕ್ಷೀಯವಾಗಿ ಕಡತದಲ್ಲಿ ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿ ತಮ್ಮ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ವಿಚಾರಣಾಧಿಕಾರಿಗಳಿಗೆ ಉಲ್ಲೇಖ (3) ರಲ್ಲಿನ ಅಧಿಕೃತ ಜ್ಞಾಪನದಲ್ಲಿ ಸೂಚಿಸಲಾಗಿತ್ತು. ವಿಚಾರಣಾಧಿಕಾರಿಗಳು ಉಲ್ಲೇಖ (4) ರಲ್ಲಿನ ತಮ್ಮ ವಿಚಾರಣಾ ವರದಿಯಲ್ಲಿ ಆರೋಪಿ ಸರ್ಕಾರಿ ನೌಕರನ ಮೇಲೆ ಹೊರಿಸಿರುವ ಆರೋಪಗಳು ಸಾಬೀತಾಗಿರುತ್ತವೆಂದು ತಿಳಿಸಿರುತ್ತಾರೆ. ವಿಚಾರಣಾ ವರದಿ ಹಾಗೂ ಕಡತದಲ್ಲಿನ ದಾಖಲೆಗಳನ್ನು ಪರಿಶೀಲಿಸಿ ವಿಚಾರಣಾ ವರದಿಯನ್ನು ಒಪ್ಪಿದೆ. ಆರೋಪಿ ಸರ್ಕಾರಿ ನೌಕರನು 32 ತಿಂಗಳಿಗೂ ಮೀರಿ

ಅನಧಿಕೃತ ಗೈರುಹಾಜರಾಗಿ ಗಂಭೀರ ದುರ್ನಡತೆಯನ್ನು ಎಸಗಿರುವುದನ್ನು ಪರಿಗಣಿಸಿ ಮತ್ತು ಇವರಿಂದ ಸರ್ಕಾರಕ್ಕೆ ನಷ್ಟವಾಗಿರುವ ರೂ.36,280.60 ಗಳನ್ನು ವಸೂಲಿ ಮಾಡಲು ಕರ್ನಾಟಕ ಭೂಕಂದಾಯ ಅಧಿನಿಯಮದಂತೆ ಭೂಕಂದಾಯದ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡುವ ಕ್ರಮವನ್ನು ನಡೆಸಲು ಬಾಕಿ ಇಟ್ಟು ಈ ಮುಂದಿನಂತೆ ಆದೇಶಿಸಿದೆ.

**ಸಂಖ್ಯೆ: ಭಾವೈಪ:65 ಸಿಬ್ಬಂದಿ (2):2003-04, ದಿನಾಂಕ: 8ನೇ ಫೆಬ್ರವರಿ 2005**

ಮೀರ್ ಮನ್ಸೂರ್ ಆಲಿಖಾನ್, ದ್ವಿತೀಯ ದರ್ಜೆ ಸಹಾಯಕ, ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು, ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 108 ರನ್ವಯ ಸರ್ಕಾರಿ ಸೇವೆಯಿಂದ ವಜಾಮಾಡಿದೆ.

ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿಗಳು ಮತ್ತು
ಪಿ.ಆರ್. 428 ಹೋಮಿಯೋಪತಿ ನಿರ್ದೇಶನಾಲಯ, ಧನ್ವಂತ್ರಿ ರಸ್ತೆ, ಬೆಂಗಳೂರು.

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಕೋಲಾರ ಉಪವಿಭಾಗ, ಕೋಲಾರ**

**ಕ್ರಮ ಸಂಖ್ಯೆ: ಎಆರ್‌ಕೆ/ಎಂ.ಕೆ.ಟಿ./ಪಾ.ನಂ.ಎಸ್.ಸಿ./12/2004-05, ದಿನಾಂಕ: 23ನೇ ಫೆಬ್ರವರಿ 2005**

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ರೀತ್ಯಾ ಅವಾರ್ಡಿಗಿಂತ ಪೂರ್ವವಾಗಿ ಷರತ್ತಿಗೊಳಪಟ್ಟು ಜಪ್ತಿ ಮಾಡುವ ಬಗ್ಗೆ.

**ಉಲ್ಲೇಖ:** ಈ ಕಛೇರಿಯ ಸಮಸಂಖ್ಯೆ ನೋಟೀಸು ದಿನಾಂಕ: 29.01.2005.

**ಪೀಠಿಕೆ:**

ಕೋಲಾರ ತಾಲ್ಲೂಕು, ಕ್ಯಾಲನೂರು ರೇಷ್ಮೆ ಬೆಳೆಗಾರರು ಹಾಗೂ ರೈತರ ಸೇವಾ ಸಹಕಾರ ಬ್ಯಾಂಕ್ ನಿ., ಇದರ ಮಾಜಿ ವ್ಯವಸ್ಥಾಪಕರು ಮತ್ತು ಗುಮಾಸ್ತರಾದ ಶ್ರೀ ನಾರಾಯಣಸ್ವಾಮಿ ಬಿನ್ ಕೃಷ್ಣಪ್ಪ ಕ್ಯಾಲನೂರು ಗ್ರಾಮ ಕೋಲಾರ ತಾಲ್ಲೂಕು ಆದ ಇವರಿಂದ ಸಂಘಕ್ಕೆ ರೂ.6,52,999-45 ಗಳ ವಸೂಲಿಗಾಗಿ ಸದರೀ ಸಂಘದ ಹಾಲಿ ವ್ಯವಸ್ಥಾಪಕರು ಈ ಕಛೇರಿಯಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69ರ ಮೇರೆಗೆ ಅಧಿಭಾರ ಸಂಖ್ಯೆ:12/2004-05 ರಂತೆ ಪ್ರಕರಣವು ವಿಚಾರಣೆಯಲ್ಲಿದೆ.

ವ್ಯವಸ್ಥಾಪಕರು ಕ್ಯಾಲನೂರು ರೇಷ್ಮೆ ಬೆಳೆಗಾರರು ಹಾಗೂ ರೈತರ ಸೇವಾ ಸಹಕಾರ ಬ್ಯಾಂಕ್ ನಿ. ಕೋಲಾರ ತಾಲ್ಲೂಕು ಇವರು ಈ ಕಛೇರಿಯಲ್ಲಿ ನಡೆಯುತ್ತಿರುವ ಮೇಲ್ಕಂಡ ಸಂಘದ ಅಧಿಭಾರ ಪ್ರಕರಣದ ಅರ್ಜಿದಾರರಾಗಿದ್ದು ಸದರಿಯವರು ಎದುರು ಅರ್ಜಿದಾರರಾದ ಶ್ರೀ ನಾರಾಯಣಸ್ವಾಮಿ ಬಿನ್ ಕೃಷ್ಣಪ್ಪ ಸಂಘದ ಮಾಜಿ ಗುಮಾಸ್ತರು ಹಾಗೂ ವ್ಯವಸ್ಥಾಪಕರು ಇವರ ಹೆಸರಿನಲ್ಲಿರುವ ಮನೆ ಮತ್ತು ಖಾಲಿ ಸೈಟು ಇವರ ಜಂಟೀ ಸಂಸಾರದಲ್ಲಿರುವ ಕ್ಯಾಲನೂರು ಗ್ರಾಮದ ತರಿ, ಖುಷ್ಕಿ ಹಾಗೂ ಬಾಗಾಯ್ತು ಹಾಗೂ ಚೆಲ್ದಿಗಾನಹಳ್ಳಿ ಗ್ರಾಮದಲ್ಲಿರುವ ಖುಷ್ಕಿ ಜಮೀನುಗಳು ಇವುಗಳನ್ನು ಇದರ ಮೇಲೆ ನಡೆಸಲಾಗುತ್ತಿರುವ ಅಧಿಭಾರ ಪ್ರಕರಣದಲ್ಲಿ ನೀಡಬಹುದಾದ ತೀರ್ಪನ್ನು ನಿರರ್ಥಕಗೊಳಿಸಲು ಪರಭಾರೆ ಮಾಡಲು ಉದ್ದೇಶಿಸಿರುತ್ತಾರೆಂದು ಈ ಕಛೇರಿಗೆ ಪತ್ರ ಬರೆದು ಸ್ಥಿರಾಸ್ತಿಗಳಿಗೆ ಸಂಬಂಧಿಸಿದ ಕಡತಗಳನ್ನು ಸಲ್ಲಿಸಿ ಜಪ್ತಿ ಆದೇಶ ಕೋರಿದ್ದು ಇದರನ್ವಯ ಈ ಕಛೇರಿಯ ಉಲ್ಲೇಖಿತ ಆದೇಶದ ರೀತ್ಯಾ ಆದೇಶದಲ್ಲಿ ನಮೂದಿಸಿರುವ ಷೆಡ್ಯೂಲ್ ಸ್ವತ್ತುಗಳನ್ನು ಕಾಯ್ದೆ ಕಲಂ 103ರ ಮೇರೆಗೆ ಷರತ್ತಿಗೊಳಪಟ್ಟು ಜಪ್ತಿ ಮಾಡಲು ಆದೇಶ ನೀಡಲಾಗಿತ್ತು ಹಾಗೂ ಈ ಆದೇಶ ಸದರೀಯವರಿಗೆ ದಿನಾಂಕ: 02.02.2005 ರಂದು ಜಾರಿ ಮಾಡಲಾಗಿತ್ತು. ಸದರೀ ಆದೇಶವನ್ನು ತೆರವುಗೊಳಿಸಲು ಶ್ರೀ ನಾರಾಯಣಸ್ವಾಮಿ ಬಿನ್ ಕೃಷ್ಣಪ್ಪ ಇವರು ಉದ್ದೇಶಿಸಿದಲ್ಲಿ, ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ." ಕೋಲಾರ ಈ ಬ್ಯಾಂಕಿನಲ್ಲಿ ರೂ.6,52,999-45 ಗಳನ್ನು ಅಮಾನತ್ ಖಾತೆಯಲ್ಲಿ 15 ದಿನಗಳೊಳಗಾಗಿ ಠೇವಣಿ ಮಾಡಿ ದಾಖಲೆಗಳನ್ನು ಸಲ್ಲಿಸಲು ಸೂಚಿಸಲಾಗಿತ್ತು. ಆದರೆ ಈ ತಹಲ್‌ವರೆವಿಗೂ ಅವರಿಂದ ಮೇಲ್ಕಂಡ ಹಣವನ್ನು ಠೇವಣಿ ಮಾಡಿರುವ ಬಗ್ಗೆ ಯಾವುದೇ ಮಾಹಿತಿ ಲಭ್ಯವಿಲ್ಲದೆ ಇದ್ದ ಕಾರಣ ಈ ಹಿಂದೆ ತಾತ್ಕಾಲಿಕ ಜಪ್ತಿ ಆದೇಶದಲ್ಲಿ ನಮೂದಿಸಿದ್ದ ಸ್ಥಿರಾಸ್ತಿಗಳನ್ನು ಜಪ್ತಿಗೀಡುಮಾಡದೆ ಷರತ್ತಿನಲ್ಲಿ ನಮೂದಿಸಿದಂತೆ ಠೇವಣಿ ಇಡಲು ವಿಫಲರಾಗಿದ್ದ ಕಾರಣ ಈ ಹಿಂದೆ ದಿನಾಂಕ: 29.01.2005ರ ಆದೇಶದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಮೇರೆಗೆ ಜಪ್ತಿಗೊಳಪಟ್ಟು ಆದೇಶವನ್ನು ಸ್ಥಿರೀಕರಣಗೊಳಿಸುವುದು ಅಗತ್ಯವೆಂದು ಪರಿಗಣಿಸಿ ಈ ಕೆಳಕಂಡ ಆದೇಶ ನೀಡಲಾಗಿದೆ.

**ಆದೇಶ ಎಆರ್‌ಕೆ/ಎಂಕೆಟಿ/ದಾವೆ ನಂ: ಎಸ್.ಸಿ.12/2004-05, ದಿನಾಂಕ: 23ನೇ ಫೆಬ್ರವರಿ 2005**

ಮೇಲೆ ವಿವರವಾಗಿ ನಮೂದಿಸಿರುವ ಕಾರಣಗಳಿಂದಾಗಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಮೇರೆಗೆ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ./69/ಸಿ.ಎಲ್.ಎಂ./2001, ದಿನಾಂಕ: 21.11.2001ರ ಮೇರೆಗೆ ನನಗೆ ಪತ್ರವಾಗಿರುವ ಅಧಿಕಾರ ಅನ್ವಯ ಶ್ರೀ ಉಮಾಕಾಂತ್, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕೋಲಾರ ಉಪ ವಿಭಾಗ, ಕೋಲಾರ ಆದ ನಾನು ಈ ಕೆಳಗೆ ಷೆಡ್ಯೂಲ್‌ನಲ್ಲಿ ವಿವರಿಸಿರುವ ಶ್ರೀ ನಾರಾಯಣಸ್ವಾಮಿ ಬಿನ್ ಕೃಷ್ಣಪ್ಪ ಮಾಜಿ ಗುಮಾಸ್ತರು ಹಾಗೂ ವ್ಯವಸ್ಥಾಪಕರು, ಕ್ಯಾಲನೂರು ರೇಷ್ಮೆ ಬೆಳೆಗಾರರು ಹಾಗೂ ರೈತರ ಸೇವಾ ಸಹಕಾರ ಬ್ಯಾಂಕ್ ನಿ., ಕ್ಯಾಲನೂರು, ಕೋಲಾರ ತಾಲ್ಲೂಕು ಇವರ ಸ್ವಂತ ಹಾಗೂ ಜಂಟೀ ಸಂಸಾರದಲ್ಲಿ ಇವರ ತಾತನವರಾದ ಶ್ರೀ ಲೇಟ್ ನಾರಾಯಣಪ್ಪ ಬಿನ್ ಮೋಟಪ್ಪ ಇವರುಗಳ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಪರಭಾರೆ ಮಾಡಲು ಸಾಧ್ಯವಾಗದಂತೆ ಈ ಕಛೇರಿಯಲ್ಲಿ ಬಾಕಿ ಇರುವ ಅಧಿಭಾರ ಪ್ರಕರಣದ ತೀರ್ಪು ಕಾಯ್ದಿರಿಸಿ ಜಪ್ತಿಗೆ ಆದೇಶಿಸಿದೆ.

**ಷೆಡ್ಯೂಲ್**

ಈ ಕೆಳಕಂಡ ಸ್ವತ್ತುಗಳು ಶ್ರೀ ನಾರಾಯಣಸ್ವಾಮಿ ಬಿನ್ ಲೇಟ್ ಕೃಷ್ಣಪ್ಪ ಹಾಗೂ ಇವರ ತಾತನವರಿಂದ ಲೇಟ್ ನಾರಾಯಣಪ್ಪ ಬಿನ್ ಮೋಟಪ್ಪ ಇವರುಗಳಿಗೆ ಸಂಬಂಧಿಸಿದ ಆಸ್ತಿಯ ವಿವರಗಳು ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ಅರ್ಜಿದಾರರ ಹೆಸರು ಮತ್ತು ವಿಳಾಸ | ಖಾತೆ ನಂ. | ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1 | ಶ್ರೀ ನಾರಾಯಣಪ್ಪ ಬಿನ್ ಮೋಟಪ್ಪ, ಕ್ಯಾಲನೂರು | 199 | 278/1 | 1.11 | ಖುಷ್ಕಿ |
| 2 | - " - | 04 | 195/3 | 0.08 | ಭಾಗಾಯ್ತು |
| 3 | - " - | 04 | 196/ಪಿ3 | 0.08 | - " - |

| ಕ್ರ.ಸಂ. | ಅರ್ಜಿದಾರರ ಹೆಸರು ಮತ್ತು ವಿಳಾಸ | ಖಾತೆ ನಂ. | ಸರ್ವೇ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 4 | ಶ್ರೀ ನಾರಾಯಣಪ್ಪ ಬಿನ್ ಮೋಟಪ್ಪ, ಕ್ಯಾಲನೂರು | 04 | 190/ಪಿ3 | 0.09 | ಭಾಗಾಯ್ತು |
| 5 | - " - | 04 | 315/ಪಿ3 | 0.06 | - " - |
| 6 | - " - | 04 | 316/ಪಿ3 | 0.36 | ಖುಷ್ಕಿ |
| 7 | - " - | 04 | 8/ಪಿ3 | 0.12 | ಭಾಗಾಯ್ತು |
| 8 | - " - | 04 | 6/ಪಿ3 | 0.08 | - " - |
| 9 | - " - | 04 | 7/ಪಿ3 | 0.13 | - " - |
| 10 | - " - | 154 | 113/1 | 0.08 | ತರಿ |
| 11 | ಶ್ರೀ ನಾರಾಯಣಪ್ಪ ಬಿನ್ ಮೋಟಪ್ಪ, ಚಲ್ದಿಗಾನಹಳ್ಳಿ. | 51 | 53 | 2.33 | ಖುಷ್ಕಿ |
| 12 | ಶ್ರೀ ನಾರಾಯಣಪ್ಪ ಬಿನ್ ಮೋಟಪ್ಪ, ಕ್ಯಾಲನೂರು | 170 | 127/2 | 0.11 | ತರಿ |
| 13 | - " - | 170 | 127/1 | 0.26 | ತರಿ |

| ಕ್ರ.ಸಂ. | ಅರ್ಜಿದಾರರ ಹೆಸರು ಮತ್ತು ವಿಳಾಸ | ಆಸ್ತಿ ನಂ. | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|
| 14 | ಶ್ರೀ ನಾರಾಯಣಸ್ವಾಮಿ ಬಿನ್ ಎನ್. ಕೃಷ್ಣಪ್ಪ, ಕ್ಯಾಲನೂರು, ಕೋಲಾರ ತಾಲ್ಲೂಕು. | 224 ಕಲ್ಲು ಚಪ್ಪಡಿ ಮದೆ | ಉxದ=27<br>ಪೂxಪ=34<br>ಮದೆ<br>ಉxದ=18<br>ಪೂxಪ=33 | ಪೂ: ಗೋಪಾಲಪ್ಪ<br>ಪ : ರಸ್ತೆ<br>ಉ: ದೊಡ್ಡ ಶ್ರೀನಿವಾಸಪ್ಪ<br>ದ : ನಾರಾಯಣಾಚಾರಿ |
| 15 | - " - | 1572 ಖಾಲಿ ಸೈಟು | ಉxದ=30<br>ಪೂxಪ=40 | ಪೂ: ನಾರಾಯಣಪ್ಪ ಮತ್ತು ಕೃಷ್ಣಪ್ಪ<br>ಪ : ಪಂಚಾಯ್ತಿ ರಸ್ತೆ<br>ಉ: ಮೋ.ದೊಡ್ಡಕೃಷ್ಣಪ್ಪ<br>ದ : ಸ್ವಂತ+ನಾರಾಯಣಾಚಾರಿ |

ಈ ಆದೇಶವನ್ನು ಈ ದಿನ ದಿನಾಂಕ: 23.02.2005 ರಂದು ನನ್ನ ಸಹಿ ಹಾಗೂ ಈ ನ್ಯಾಯಾಲಯದ ಮುದ್ರೆಯೊಂದಿಗೆ ನೀಡಲಾಗಿದೆ.

ಪಿ.ಆರ್. 429 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪ-ವಿಭಾಗ, ಕೋಲಾರ.

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ವ್ಯಾಜ್ಯ ಸಂಖ್ಯೆ: ಜೆ.ಆರ್.ಡಿ/ಯು.ಬಿ.ಎಫ್-ಟಿ/219/2004-05**

**ಹಿಂದಿನ ವ್ಯಾಜ್ಯ ಸಂಖ್ಯೆ: ಆನಿ (ಐ ಅಂಡ್ ಎಂ) ಡಿಐಎಸ್/ಡಿ-7/9262/2004-05**

**ಅರ್ಜಿದಾರರು** **ವಿರುದ್ಧ** **ಎದುರು ಅರ್ಜಿದಾರರು:**

1) ಜನರಲ್ ಮ್ಯಾನೇಜರ್,
ಹಿರೇಕೆರೂರು ಪಟ್ಟಣ ಸಹಕಾರ
ಬ್ಯಾಂಕ್ ಲಿ., ಹಿರೇಕರೂರು.

1) ವ್ಯವಸ್ಥಾಪಕ ನಿರ್ದೇಶಕರು,
ಮೆ: ನಂದಿ ರಿ-ರೋಲಿಂಗ್ ಮಿಲ್ಸ್ ಪ್ರೈ. ಲಿ., ಹುಬ್ಬಳ್ಳಿ, ಧಾರವಾಡ ಜಿಲ್ಲೆ.
2) ಶ್ರೀ ನವೀನ್ ಎಂ. ಕೋರಿ,
ಆರ್./ಒ. ವಿಜಯನಗರ, ಹಿರೇಕೆರೂರು, ಹಾವೇರಿ ಜಿಲ್ಲೆ.
3) ಶ್ರೀ ಶಿವಲಿಂಗಪ್ಪ ಮಲ್ಲೇಶಪ್ಪ ಕೋರಿ,
ಆರ್/ಒ. ವಿಜಯನಗರ, ಹಿರೇಕೆರೂರು, ಹಾವೇರಿ ಜಿಲ್ಲೆ.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರೀತ್ಯ ಚರಾಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಿರುವ ಬಗ್ಗೆ ನೋಟೀಸು**

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ.18,37,170.00 (ಹದಿನೆಂಟು ಲಕ್ಷದ ಮೂವತ್ತೇಳು ಸಾವಿರದ ಒಂದು ನೂರಾ ಎಪ್ಪತ್ತುಗಳು ಮಾತ್ರ) ಗಳನ್ನು ವ್ಯಾಜ್ಯ ದಿನಾಂಕದಿಂದ ಬೇಬಾಕಿಯಾಗಿ ಪಾವತಿಯಾಗುವ ದಿನಾಂಕದವರೆಗೆ ಶೇಕಡಾ 17ರ ದರದಂತೆ ಆಗುವ ಬಡ್ಡಿ ಹಾಗೂ ಕೋರ್ಟ್ ಖರ್ಚಿನೊಂದಿಗೆ ಪ್ರತಿವಾದಿಯ ಚರ ಮತ್ತು ಸ್ಥಿರ ಆಸ್ತಿಗಳನ್ನು ಮಾರಾಟ ಮಾಡಿ ವಸೂಲು ಮಾಡಿಸಲು ಆದೇಶ ನೀಡಬೇಕೆಂದು ದಾವಾ ಅರ್ಜಿಯಲ್ಲಿ ಕೋರಿರುತ್ತಾರೆ.
2. 1ನೇ ಪ್ರತಿವಾದಿಯವರು ಪಡೆದಿರುವ ಈ ಸಾಲಕ್ಕೆ 2ನೇ ಮತ್ತು 3ನೇ ಪ್ರತಿವಾದಿಯವರುಗಳು ಜಾಮೀನುದಾರರಾಗಿರುತ್ತಾರೆ.
3. ವಾದಿಯು ಈ ದಾವಾ ಅರ್ಜಿಯೊಂದಿಗೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಅರ್ಜಿಯನ್ನು ಸಲ್ಲಿಸಿ 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ನಮೂದಿಸಿರುವ ಚರ ಮತ್ತು ಸ್ಥಿರ ಆಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment Before Judgement) ಆದೇಶ ನೀಡುವಂತೆ ಕೋರಿರುತ್ತಾರೆ. ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ / ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದಿದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಈ

ನ್ಯಾಯಾಲಯವು ಅವಾರ್ಡ್ ಅಥವಾ ಡಿಕ್ರಿ ನೀಡಿದರೂ ಸದರಿ ಅವಾರ್ಡ್ / ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ವಾದಿಯವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

4. ವಾದಿಯ ದಾವಾ ಅರ್ಜಿ ಹಾಗೂ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಗಳನ್ನು ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯಲ್ಲಿ ನಮೂದಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. 1ನೇ ಪ್ರತಿವಾದಿಯು ಈ ಕೆಳಗೆ ಶೆಡ್ಯೂಲಿನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ ಈ ದಾವೆಯಲ್ಲಿ ನೀಡಲಿರುವ ಅವಾರ್ಡ್ / ಡಿಕ್ರಿಯನ್ನು ವಾದಿಯು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

5. ಮೇಲೆ ನಮೂದಿಸಿರುವ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮತ್ತು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ: ಸಿಎಂಡಬ್ಲ್ಯೂ 191 ಸಿಎಲ್ಎಂ 2004 (ಭಾಗ-1) ದಿನಾಂಕ: 02.02.2005 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಆರ್.ಎಂ. ನಟರಾಜ್ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು 1ನೇ ಪ್ರತಿವಾದಿ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರ ಆಸ್ತಿಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ಒಟ್ಟು ರೂ.18,37,170.00 (ಹದಿನೆಂಟು ಲಕ್ಷದ ಮೂವತ್ತೇಳು ಸಾವಿರದ ಒಂದು ನೂರಾ ಎಪ್ಪತ್ತುಗಳು ಮಾತ್ರ) ಗಳನ್ನು ವ್ಯಾಜ್ಯ ದಿನಾಂಕದಿಂದ ಸಾಲ ಪೂರ್ತಿ ಪಾವತಿಯಾಗುವ ದಿನಾಂಕದವರೆಗೆ ಶೇಕಡಾ 17ರ ದರದಂತೆ ಆಗುವ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಾದಿಯ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ದಿನಾಂಕ: 25.03.2005ರ ಒಳಗಾಗಿ ಜಮಾಮಾಡಿ, ಹೀಗೆ ಜಮಾಮಾಡಿದ ಅಧಿಕೃತ ಚಲನ್ / ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ 1ನೇ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗಿನ ಶೆಡ್ಯೂಲಿನಲ್ಲಿ ನಮೂದಿಸಿರುವ ಚರ ಮತ್ತು ಸ್ಥಿರ ಆಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಗಳು ಈ ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಒಳಪಡುತ್ತವೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಶೆಡ್ಯೂಲ್ ಸ್ಥಿರಾಸ್ತಿಯ ವಿವರ**

ತಾರೆಹಾಳ, ಹುಬ್ಬಳ್ಳಿ ಇಂಡಸ್ಟ್ರೀಯಲ್ ಏರಿಯಾದ ಫ್ಲಾಟ್ ನಂ.2ಡಿ ಮತ್ತು 2ಇ, ಕಟ್ಟಡ ಮತ್ತು ಯಂತ್ರಗಳನ್ನು ಒಳಗೊಂಡು, ಈ ಸ್ವತ್ತಿನ ಚಕ್ಕುಬಂದಿ:

| | | |
|---|---|---|
| ಪೂರ್ವಕ್ಕೆ | : | ಖಾಸಗಿ ಜಮೀನು |
| ಪಶ್ಚಿಮಕ್ಕೆ | : | ರಸ್ತೆ ಹೆಚ್ ರಿಂದ ಕೆ ವರೆಗೆ |
| ಉತ್ತರಕ್ಕೆ | : | ಫ್ಲಾಟ್ ನಂ.2ಸಿ |
| ದಕ್ಷಿಣಕ್ಕೆ | : | ಫ್ಲಾಟ್ ನಂ.2ಎಫ್ |

**ಶೆಡ್ಯೂಲ್ ಚರಾಸ್ತಿಯ ವಿವರ**

1. ಮಿಲ್ ಶೆಡ್, 2. ಮೇನ್ ಮೋಟಾರ್, 3. ಸ್ಮಾಲ್ ಪುಲ್ಲಿ, 4. ಬಿಗ್ ಪುಲ್ಲಿ, 5. ವಿ. ಬೆಲ್ಟ್ಸ್, 6. ಗೇರ್ ಕಪ್ಲಿಂಗ್, 7. ಪ್ಲೈವೀಲ್, 8. ಪಿನಿಯನ್ 160 ಪಿ.ಸಿ.ಡಿ., 9. ಆರು ಮಿಲ್ಸ್ ಸ್ಟಾಂಡ್ ರೋಲ್ಸ್ ಸ್ಪಿಂಡ್ಲಸ್ ಮತ್ತು ಕಪ್ಲಿಂಗ್ಸ್‌ನೊಂದಿಗೆ, 10. ವಾಟರ್ ಪಂಪ್ ಮತ್ತು ಪೈಪ್‌ಲೈನ್ಸ್, 11. ಪ್ಲೇಟ್ಸ್ ಗ್ರೇಡರ್ ಚಾನೆಲ್ಸ್, 12. ಎಲೆಕ್ಟ್ರಿಕಲ್ ಎ.ಸಿ.ಬಿ. ಪ್ಯಾನಲ್ ಕೇಬಲ್ಸ್ ಮತ್ತು ಇತರೆ ಸ್ವಿಚ್‌ಗಳು ಮತ್ತು ಎಲ್.ಆರ್.ಎಸ್., 13. ಲೇತ್, 14. ಷಾಪ್ಪರ್ ವೆಲ್ಡಿಂಗ್ ಯಂತ್ರ ಹಾಗೂ ಇತರೆ ಯಂತ್ರ ಹಾಗೂ ಸಂಬಂಧಪಟ್ಟ ವಸ್ತುಗಳು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 23.02.2005 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ,
ಕ.ರಾ.ಸ.ಪ. ಬ್ಯಾಂಕುಗಳ ಮಹಾಮಂಡಳಿ ನಿ., ಬೆಂಗಳೂರು.

ಪಿ.ಆರ್. 430

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ: ಕಾನಪ:ಪ್ರ:ಎಫ್-ಸಿಆರ್/5/2005, ದಿನಾಂಕ: 11ನೇ ಫೆಬ್ರವರಿ 2005**

**ಅರ್ಜಿದಾರರು:**

1) ಶ್ರೀಮತಿ ಸುಜಾತ ಕೋಂ ಲೇಟ್ ಕೆ.ಜೆ. ಆನಂದ, ಚಿತ್ರದುರ್ಗ.

**ಪ್ರತಿವಾದಿಗಳು:**

1) South Western Railway Divisional Office, Mysore.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಸುಜಾತ ಇವರು, ತಾವು ಮೃತ ಆನಂದ ಇವರ ಹೆಂಡತಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಆನಂದ ಇವರು ಒಂದನೇ ಪ್ರತಿವಾದಿಗಳಾದ South Western Railway ಇವರಲ್ಲಿ ಟ್ರ್ಯಾಕ್ ಮ್ಯಾನ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ

